# ಪಾನರ

ಮಾರ್ಚ್ - ಏಪ್ರಿಲ್ 2002 - ವಿಶೇಷ ಸಂಚಿಕೆ



- ನಾವು ವಿಶ್ವಾಸ, ನಂಬಿಕೆಯನ್ನು ಮತ್ತೆ ಕಟ್ಟಬಲ್ಲವೆ?
- ರಾಮ - ವೈದಿಕ ರಾಜಕೀಯದ ತಂತ್ರ
- ಸೀತೆಯರ ಸೇನೆ
- "ಹೇರಾಮ್" ಗಾಂಧೀಯ ನಾಡಿನಲ್ಲಿ ನಡೆದ ನರಮೇಧ

# ಮಾನಸ

ತಿಂಗಳ ಪತ್ರಿಕೆ

ಸಂಪುಟ 21 ಸಂಚಿಕೆ : : 3

ಮಾರ್ಚ್ - ಎಪ್ರಿಲ್ - 2002 - ವಿಶೇಷ ಸಂಚಿಕೆ





ವಿಳಾಸ
''ಮಾನಸ'' ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067
ಇ-ಮೈಲ್ : manasapathrike@yahoo.co.in



ಸೂಚನೆ: ಬಿಡಿ ಪ್ರತಿ 5-00 ರೂ.
ವಾರ್ಷಿಕ ಚಂದಾ 50-00 ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


## ಈ ಸಂಚಿಕೆಯಲ್ಲಿ.........






*ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ*
*ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - 560 067*

# ಸಂಪಾದಕೀಯ



ಗುಜರಾತಿನ ಕೋಮು ದಳ್ಳುರಿಯ ಭೀಭತ್ಸ ಕೃತ್ಯಗಳು ನಮ್ಮ ಕಣ್ಮುಂದೆ ಸಾಕ್ಷಿಯಾಗಿ ನಿಂತು - ಜನರ ಧಾರ್ಮಿಕ ಅಂಧತೆಯನ್ನು ಮೌಢ್ಯಗಳನ್ನು ನಮಗೆ ತಿಳಿಸುತ್ತವೆ. ರಾಜ್ಯದ, ಪ್ರಭುತ್ವದ ಶಕ್ತಿ ನಿಶ್ಶಕ್ತಿಯಾದುದನ್ನು, ಉದ್ದೇಶ ಪೂರ್ವಕವಾದ ನಿರಾಸಕ್ತಿ, ನಿರ್ವಿಕಾರ ಮನೆ ಮಾಡಿಕೊಂಡಿರುವುದನ್ನು ನಾವು ಕಾಣುತ್ತೇವೆ. ಮಹಿಳೆಯರು ಅವರವರ ಸಮುದಾಯದ ನೆರಳಲ್ಲೇ ಆತ್ಮರಕ್ಷಣೆ ಪಡೆಯಬೇಕಾದ ಅನಿವಾರ್ಯ ಸ್ಥಿತಿ ಉಂಟಾಗಿರುವುದು ಕಂಡುಬರುತ್ತದೆ. ಗುಜರಾತಿನಲ್ಲಿ ಮಾತನಾಡಲಾಗದಂತಹ ಲೈಂಗಿಕ ದೌರ್ಜನ್ಯಕ್ಕೆ ಒಳಗಾದ ಮುಸ್ಲಿಂ ಮಹಿಳೆಯರು ರಕ್ಷಣೆ ಪಡೆಯುತ್ತಿರುವುದು ಪೋಲೀಸರಿಂದ ಅಲ್ಲ, ಸರ್ಕಾರದ ಅಧಿಕಾರಿಗಳಿಂದ ಅಲ್ಲ; ಅಥವಾ ಸ್ವಯಂ ಸೇವಾ ಸಂಸ್ಥೆಗಳಿಂದಲೂ ಅಲ್ಲ. ಅವರು ರಕ್ಷಣೆ ಪಡೆಯುತ್ತಿರುವುದು ಮುಸ್ಲಿಂರಿಂದ ಮಾತ್ರ. ಮುಸ್ಲಿಂ ರಕ್ಷಣೆಗೆ ಮುಸ್ಲಿಂರೇ ಮುಂದಾಗಬೇಕು ಎನ್ನುವ ವಾದ ಮುಂದು ಮಾಡಿ ಪೋಲೀಸ್, ಸರ್ಕಾರ ಎಲ್ಲಾ ಹಿಂದೆ ಸರಿದುಕೊಂಡಿದೆ. ಹೀಗೆ ಸಮುದಾಯ, ಧರ್ಮದ ನೆರಳಿಗೇ ವಾಪಸ್ಸು ದೂಡಲ್ಪಡುವ ಅಸಹಾಯಕ ಮಹಿಳೆಯರು ಹಾಗೂ ಇತರರು ತಮ್ಮ ತಮ್ಮವರಿಗೇ ಹತ್ತಿರವಾಗಿ ದ್ವೇಷದ ದಳ್ಳುರಿಯನ್ನು ಬೆಳಸುವಲ್ಲಿ ಸಹಕಾರಿಯಾಗುವಂತಾಗಿದೆ. ಜೊತೆಗೆ ಮಹಿಳೆಯರು ಪಿತೃಪ್ರಧಾನ ಮೌಲ್ಯಗಳ ವಿರುದ್ಧ ಧ್ವನಿ ಎತ್ತಲಾಗದಂತಹ ಇಕ್ಕಟ್ಟಿನ ಸ್ಥಿತಿಯಲ್ಲಿ ಸಿಕ್ಕಿಹಾಕಿಕೊಳ್ಳುತ್ತಿದ್ದಾರೆ.

ಗುಜರಾತಿನ ಮಹಿಳೆಯರ ಮೇಲೆ ನಡೆದ ಕೋಮುದಳ್ಳುರಿಯ ದೌರ್ಜನ್ಯಗಳನ್ನು ಇತಿಹಾಸ ಎಂದೂ ಕ್ಷಮಿಸುವುದಿಲ್ಲ. ಈ ಭೀಭತ್ಸ ಕೃತ್ಯ ಯಾವ ಕೋಮಿನ ಮಹಿಳೆಯರ ಮೇಲಾದರೂ ಅದು ಖಂಡನಾರ್ಹ. ಮಹಿಳೆಯರ ದೇಹಗಳನ್ನು ರಣರಂಗಗಳನ್ನಾಗಿ ಮಾಡಿಕೊಂಡು ಸೇಡು, ಛಲ, ಹಟ ತೀರಿಸಿಕೊಳ್ಳುತ್ತಿರುವುದು, ಅವರ ಮೇಲೆ ಅತ್ಯಾಚಾರವೆಸಗಿ, ಬೆಂಕಿಗೆ ಆಹುತಿ ಮಾಡುತ್ತಿರುವುದು ನಮ್ಮೆಲ್ಲರೊಳಗಿನ ರಾಕ್ಷಸತನವನ್ನು ಸೂಚಿಸುತ್ತದೆ. ಯಾವ ಧರ್ಮ ಕೂಡ ಮೂಲಭೂತವಾಗಿ ರಾಕ್ಷಸತನವನ್ನು ಎತ್ತಿ ಹಿಡಿಯುವುದಿಲ್ಲ.

ರಾಷ್ಟ್ರೀಯ ಮಹಿಳಾ ಆಯೋಗ - ಗುಜರಾತಿನ ಮಹಿಳೆಯರ ಬಗ್ಗೆ ಬರೆದಿರುವ ರೀತಿ ಖಂಡನಾರ್ಹ. ಮಹಿಳಾ ಹಕ್ಕುಗಳ ರಕ್ಷಣೆಗೆ ತೊಡಗಬೇಕಾದ ಇಂತಹ ಆಯೋಗಗಳೇ ಹೀಗೆ ಸರ್ಕಾರದೊಂದಿಗೆ ಶಾಮೀಲಾಗಿ ಮಹಿಳೆಯರಿಗೆ ವಿರುದ್ಧವಾಗಿ ವರ್ತಿಸುತ್ತಿರುವುದು ವಿರೋದಾಭಾಸದ ಸಂಗತಿಯಾಗಿದೆ. ಈ ಬಗ್ಗೆ ಮಹಿಳೆಯರು ತೀವ್ರ ಗಮನಹರಿಸಬೇಕಾಗಿದೆ.

ಇಂತಹ ದೌರ್ಜನ್ಯಗಳ ಹಿನ್ನಲೆಯಲ್ಲಿ ಮಾನವೀಯ ಕಾಳಜಿ ಇರುವ ಜನ ಒಂದಾಗಬೇಕಿದೆ. ಗುಜರಾತಿನ ಮಹಿಳೆ ಹಾಗು ಮಕ್ಕಳ ಚಿಂತಾಜನಕ ಸ್ಥಿತಿ ನಮ್ಮ ಕಣ್ಣು ತೆರೆಯಿಸಬೇಕಾಗಿದೆ. ಮಹಿಳಾ ಗುಂಪುಗಳು ಹಾಗೂ ಇತರ ಪ್ರಗತಿಪರ ಗುಂಪುಗಳ ಮಧ್ಯದ ಸಂಘಟನೆ ಬಲವಾಗಬೇಕಿದೆ. ಕೋಮುವಾದಕ್ಕೆ, ಪ್ರತಿರೋದವಾದ ಬಲವಾದ ಶಕ್ತಿಯಾಗಿ ಇಂದು ನಾವೆಲ್ಲ ಬೆಳೆಯಬೇಕಾಗಿದೆ.

- ಸಂಪಾದಕ ಮಂಡಳಿ

# ನಾವು ವಿಶ್ವಾಸ, ನಂಬಿಕೆಯನ್ನು ಮತ್ತೆ ಕಟ್ಟಬಲ್ಲವೆ ?

ದೆಹಲಿ, ಬೆಂಗಳೂರು, ತಮಿಳುನಾಡು, ಅಹಮದಾಬಾದ್‌ನ ಏಳು ಜನ ಮಹಿಳೆಯರು (ಸಯೀದಾ ಹಮೀದ್, ಮಾಲಿನಿ ಘೋಷ್, ಫರ್ರಾ ನಾಕ್ವಿ, ರೂತ್ ಮನೋರಮಾ, ಮಾರಿಥೇಕೇಕರ, ಗಗನ್ ಸೇಥಿ, ಶೀಬಾ ಜಾರ್ಜ)5 ದಿನದಲ್ಲಿ ಅಂದರೆ 2002 ಮಾರ್ಚ್ 27ರಿಂದ ಮಾರ್ಚ್ 31ರವರೆಗೆ ನಡೆಸಿದ ಸತ್ಯ ಸಂಗತಿ ಶೋಧನೆಯ ವರದಿಯನ್ನು ಆಧರಿಸಿ ಈ ಲೇಖನವನ್ನು ತಯಾರಿಸಲಾಗಿದೆ. ಗುಜರಾತಿನಲ್ಲಿ ನಡೆಯುತ್ತಿರುವ ಹಿಂಸಾಚಾರ ಅಲ್ಪ ಸಂಖ್ಯಾತ ಮಹಿಳೆಯರ ಮೇಲೆ ಉಂಟು ಮಾಡಿರುವ ಭೀಕರ ಪರಿಣಾಮವನ್ನು, ಹಾಗೂ ಅವರ ಅನುಭವಗಳನ್ನು ಈ ಸತ್ಯಶೋಧನೆಯ ವರದಿಯಲ್ಲಿ ಪ್ರಕಟಿಸಲಾಗಿದೆ. ಕೋಮು ಗಲಭೆಗಳು ನಡೆವಾಗ ಪುರುಷರ ಗೌರವ, ಘನತೆ, ಪ್ರತಿಷ್ಠೆಗಳನ್ನು ಮುರಿಯಲು ಮಹಿಳೆಯರನ್ನು, ಅವರ ದೇಹಗಳನ್ನು ಗುರಿಯಾಗಿ ಇಟ್ಟುಕೊಳ್ಳುವುದು, ಅದರ ಮೂಲಕ ಪಾಠ ಕಲಿಸಲು ಪ್ರಯತ್ನಿಸುವುದು ಹೊಸ ಸಂಗತಿಗಳೇನಲ್ಲ. ಮಹಿಳೆಯರು ದೈಹಿಕ ಹಾಗೂ ಮಾನಸಿಕವಾಗಿ ಚಿತ್ರ ವಿಚಿತ್ರವಾದ ಹಿಂಸೆಗೆ ಒಳಗಾಗುವುದಲ್ಲದೇ, ಅವರ ಕುಟುಂಬದ ಪುರುಷರು ಮಡಿದಲ್ಲಿ ಇಡೀ ಸಂಸಾರದ ಹೊಣೆಯನ್ನು ಹೊರುವ ಜವಾಬ್ದಾರಿಯನ್ನು ಹೆಗಲಿಗೇರಿಸಿಕೊಳ್ಳುತ್ತಾರೆ. ಇಂತಹ ಧಾರುಣ ಕತೆಗಳು ಗೋದ್ರ ದುರ್ಘಟನೆಯ ನಂತರದ ಹಿಂಸಾಚಾರದಲ್ಲಿ ಗುಜರಾತಿನಲ್ಲಿ ನಡೆದಿದ್ದು, ಮುಸ್ಲಿಂ ಮಹಿಳೆಯರು ಅತ್ಯಾಚಾರಕ್ಕೊಳಗಾಗಿದ್ದಾರೆ, ಜೀವಂತವಾಗಿ ದಹಿಸಲ್ಪಟ್ಟಿದ್ದಾರೆ, ಜೊತೆಗೆ ಧಾರುಣವಾದ ಹಿಂಸೆಯಿಂದ ನರಳುತ್ತಾ ಆಶ್ರಯ ತಾಣಗಳಲ್ಲಿ ಆತಂಕದಿಂದ ಭವಿಷ್ಯದ ಕಡೆಗೆ ನೋಡುತ್ತಿದ್ದಾರೆ. ಮಹಿಳೆಯರ ಮೇಲೆ ನಡೆಯುತ್ತಿರುವ ಈ ಹಿಂಸೆ ಬೆಳಕಿಗೆ ಬರುವುದಿರಲಿ, ಇದು ಮುಖ್ಯ ಸಮಸ್ಯೆ ಎಂದು ರಾಜ್ಯದ ಪ್ರಭುತ್ವಕ್ಕಾಗಲೀ, ಆಳುವ ವರ್ಗದವರಿಗಾಗಲೀ, ಪೋಲೀಸರಿಗಾಗಲೀ ಅನ್ನಿಸದೇ ಇರುವುದು ನಮ್ಮ ಸಮಾಜದಲ್ಲಿ ಮಹಿಳೆಯರಿಗಿರುವ ಶೋಚನೀಯ ಸ್ಥಿತಿಯನ್ನು ವಿವರಿಸುತ್ತದೆ. 'ಕೋಮು ದಳ್ಳುರಿ ಆರಿದ ಮೇಲೆ ಮಹಿಳೆಯರ ಸಮಸ್ಯೆಯತ್ತ ಕಣ್ಣು ಹರಿಸುವುದು' ಇದು ಇತಿಹಾಸದಿಂದ ಇಲ್ಲಿಯವರೆಗಿನ ಸಾಮಾನ್ಯ ಪ್ರತಿಕ್ರಿಯೆ. ಆದರೆ ಇಂದು ಗುಜರಾತಿನ ಕೋಮು ದಳ್ಳುರಿಗೆ ಹೆಚ್ಚು ಗುರಿಯಾಗಿರುವವರೇ ಮುಸ್ಲಿಂ ಮಹಿಳೆಯರು. ಇಡಿಯ ಹಿಂಸಾಚಾರದ ಹಂತದಲ್ಲಿ ಕೇಂದ್ರ ಬಿಂದುವಾಗಿರುವ ಮುಸ್ಲಿಂ ಮಹಿಳೆಯರು ಗುಜರಾತಿನಲ್ಲಿ ಹಲವಾರು ಕಡೆ ನಡೆದ ಹಿಂಸಾಚಾರದಲ್ಲಿ ಹೇಗೆ ಬಲಿಪಶುಗಳಾಗಿದ್ದಾರೆ? ಅವರ ಅನ್ನಿಸಿಕೆಗಳೇನು? ಅನುಭವಗಳೇನು? ಎಂಬುದನ್ನು 'ಗುಜರಾತಿನ ಹಿಂಸಾಚಾರ ಹೇಗೆ ಅಲ್ಪ ಸಂಖ್ಯಾತ ಮಹಿಳೆಯರನ್ನು ದಂಡಿಸಿದೆ'? ಎಂಬ ಸತ್ಯ ಶೋಧನೆಯ ಇಂಗ್ಲೀಷ್ ವರದಿಯನ್ನು ಆಧರಿಸಿ ಈ ಲೇಖನ ನಿಮ್ಮ ಮುಂದೆ ಇಡುತ್ತಿದ್ದೇವೆ. ವರದಿಯ ಲೇಖಕಿಯರು ಮಂಡಿಸಿದ ಬೇಡಿಕೆ, ಸಲಹೆ, ಸೂಚನೆಗಳನ್ನು ಸಹ ಇಲ್ಲಿ ದಾಖಲಿಸಿದ್ದೇವೆ.

ಮುರಿದು ಬಿದ್ದಿವೆ ವಿಷಯಗಳು (ಮನಸ್ಸುಗಳು)
ಕೇಂದ್ರ ಹಿಡಿದಿಡಲಸಾಧ್ಯ
ಅರಾಜಕೀಯತೆ ಜಗತ್ತಿನ ಮೇಲೆ ದಾಳಿ ಇಟ್ಟಿದೆ
ರಕ್ತದೋಕುಳಿಯ ಅಲೆ ಬೀಸುತ್ತಿದೆ. ಎಲ್ಲಡೆ
ಮುಗ್ಧತೆಯ ಆಚರಣೆ ಮುಳುಗಿ ಹೋಗಿದೆ
ಉತ್ತಮರ ನಂಬಿಕೆಯಲ್ಲಿ ಕೊರತೆ ಇದ್ದರೆ
ನೀಚರು ತುಳುಕುತ್ತಿದ್ದಾರೆ ಉದ್ವೇಗದ ಉತ್ತುಂಗದಲ್ಲಿ

(ಡಬ್ಲ್ಯು.ಬಿ.ಯೇಟ್ಸ್, ದಿ ಸೆಕೆಂಡ್ ಕಮಿಂಗ್)

ಅಹಮದಾಬಾದ್‌ನಲ್ಲಿ ನಡೆದ ಹಿಂಸಾಚಾರದಲ್ಲಿ ಮಹಿಳೆಯರ ಮೇಲೆ ಧಾರುಣ ರೀತಿಯ ಲೈಂಗಿಕ ಹಿಂಸಾಚಾರ ನಡೆದಿರುವುದನ್ನು ಸತ್ಯ ಶೋಧನೆಯ ವರದಿಯು ದಾಖಲಿಸುತ್ತದೆ. ಅಹಮದಾಬಾದ್‌ನಲ್ಲಿ ಈ ಹಿಂಸಾಚಾರ ಫೆಬ್ರುವರಿ 28ರಿಂದ ಮಾರ್ಚ್ 1 ರವರೆಗೆ ನಡೆದಿರುವುದು ಕಂಡುಬರುತ್ತದೆ. ಅಲ್ಪ ಸಂಖ್ಯಾತ ಮಹಿಳೆಯರ ಮೇಲೆ ನಡೆದ ಈ ಹಿಂಸಾಚಾರ 'ಇದ್ದಕ್ಕಿದ್ದಂತೆ ಸ್ಫೂರ್ತಿಯಿಂದ' ನಡೆದುದಲ್ಲ. ಅದು ಮೊದಲೇ ಯೋಜಿಸಿ ನಿರ್ಧರಿಸಿದ್ದು, ಸಂಘಟಿತವಾಗಿದ್ದು ಮತ್ತು ಯಾರನ್ನು ಬಲಿಪಶುಗಳನ್ನಾಗಿ ಮಾಡಬೇಕೆಂದು ಮೊದಲೇ ನಿರ್ಧರಿಸಲಾಗಿತ್ತು. ಈ ಅಪರಾಧಗಳಾಗಲೀ, ಹಿಂಸಾಚಾರಗಳಾಗಲೀ ಸುದ್ದಿ ಮಾಧ್ಯಮಗಳ ಪ್ರಮುಖ ವರದಿಗಳಾಗಲೇ ಇಲ್ಲ. ಆಶ್ರಿತ ತಾಣಗಳಲ್ಲಿ ಇರುವ ಮುಸ್ಲಿಂ ಮಹಿಳೆಯರು ಅನುಭವಿಸಿದ ಲೈಂಗಿಕ ಹಿಂಸೆಗಳಲ್ಲಿ ಅತ್ಯಾಚಾರ, ಗುಂಪು ಅತ್ಯಾಚಾರ, ಬಟ್ಟೆ ಕಳಚಿ ಬೆತ್ತಲಾಗಿಸುವುದು, ಬೇರೆ ಬೇರೆ ವಸ್ತುಗಳನ್ನು ಹೆಂಗಸಿನ ದೇಹದಲ್ಲಿ ತೂರಿಸುವುದು, ದೈಹಿಕ ಕಿರುಕುಳ, ಈ ಎಲ್ಲವೂ ಸಾಮಾನ್ಯ ಅಂಶಗಳಾಗಿವೆ. ಅತ್ಯಾಚಾರಕ್ಕೊಳಗಾದ ಹೆಚ್ಚು ಮಂದಿ ಮಹಿಳೆಯರನ್ನು ಜೀವಂತವಾಗಿ ದಹಿಸಲಾಗಿದೆ.




ಈ ರೀತಿಯ ಹಿಂಸಾಚಾರಗಳು ಅನೇಕ ಮಹಿಳೆಯರ ಮೇಲೆ ನಡೆದಿದ್ದರೂ ದಾಖಲಾಗಿರುವ ಎಫ್.ಐ.ಆರ್‌ಗಳ ಸಂಖ್ಯೆ ಅತ್ಯಂತ ಕಡಿಮೆ. ಮಾಧ್ಯಮದಲ್ಲಿ ಈ ಸಮಸ್ಯೆ ಕಾಣದಂತೆ ಮುಚ್ಚಿ ಹಾಕಲಾಗಿದೆ. ರಾಜ್ಯ ಪ್ರಭುತ್ವ ಹಾಗೂ ಪೋಲೀಸ್ ಮೌನವಾಗಿರುವ ಮೂಲಕ, ನಿರ್ವಿಕಾರವಾಗಿರುವ ಮೂಲಕ ಮಹಿಳೆಯರ ಮೇಲೆ ನಡೆಯುವ ಹಿಂಸೆಯನ್ನು ಮುಂದುವರಿಸಲು ಸಹಾಯಕವಾಗಿವೆ. ಮಹಿಳೆಯರನ್ನು ರಕ್ಷಿಸುವ ಪ್ರಯತ್ನಗಳೇ ಕಂಡುಬಂದಿಲ್ಲ. ಮಹಿಳಾ ಪೋಲೀಸ್ ಪಡೆಗಳನ್ನು ಕಾರ್ಯನಿರತವಾಗುವಂತೆ ಮಾಡಿಲ್ಲ. ಹಿಂಸೆಗೊಳಗಾದ ಮಹಿಳೆಯರು ಎಫ್.ಐ.ಆರ್‌ಗಳನ್ನು ದಾಖಲುಗೊಳಿಸುವ ಹಕ್ಕುಗಳನ್ನು ಕಳೆದುಕೊಂಡಿದ್ದಾರೆ. ಗುಜರಾತಿನಲ್ಲಿ ಈ ದುರ್ಭಾಗ್ಯ ಮಹಿಳೆಯರು ನ್ಯಾಯವನ್ನು ಬೇಡಬಹುದಾದ ಯಾವುದೇ ಸಾಂಸ್ಥಿಕ ರಚನೆಗಳು ಜೀವಂತವಾಗಿಲ್ಲದಿರುವುದು ಅವರ ಶೋಚನೀಯ ಪರಿಸ್ಥಿತಿಯನ್ನು ವಿವರಿಸುತ್ತವೆ. ಮಹಿಳೆಯರ ಮೇಲೆ ನಡೆದ ಹಿಂಸೆಗಳು ಅವರ ಮೇಲೆ ದೈಹಿಕ, ಆರ್ಥಿಕ ಹಾಗೂ ಮಾನಸಿಕ ಒತ್ತಡಗಳನ್ನು ಹೇರಿದೆ. ಈ ಒತ್ತಡಗಳನ್ನು ಕಡಿಮೆ ಮಾಡುವ ಜವಾಬ್ದಾರಿಯನ್ನು ರಾಜ್ಯ ಸರ್ಕಾರ ಹೊತ್ತುಕೊಂಡಿಲ್ಲ. ಆಶ್ರಿತ ತಾಣಗಳಲ್ಲಿ ತಮ್ಮ ಮಕ್ಕಳನ್ನು ಉಳಿಸಿಕೊಳ್ಳಲು ತಾಯಂದಿರು ಪಡುತ್ತಿರುವ ಯಾತನೆಯನ್ನು ರಾಜ್ಯ ಸರ್ಕಾರ ಗಮನಿಸದಂತೆ ಕಣ್ಣು ಮುಚ್ಚಿಕೊಂಡಿದೆ. ಗುಜರಾತಿನಲ್ಲಿ ಮೊದಲ ಬಾರಿಗೆ ಗ್ರಾಮೀಣ ಪ್ರದೇಶಗಳಲ್ಲಿ ಈ ಕೋಮು ದಳ್ಳುರಿ ಹತ್ತಿಕೊಂಡು ಉರಿದಿದ್ದು, ಗ್ರಾಮೀಣ ಮುಸ್ಲಿಂ ಹೆಂಗಸರು ಕೆಲವು ಜಾತಿ, ಪಂಗಡಗಳ ಕೋಪಕ್ಕೆ ತುತ್ತಾಗಿದ್ದಾರೆ. ಈ ಎಲ್ಲಾ ಹಿಂಸಾಚಾರದ ಹಿಂದೆ ವಿಶ್ವ ಹಿಂದೂ ಪರಿಷತ್ ಹಾಗೂ ಭಜರಂಗದಳ ಎರಡೂ ವ್ಯವಸ್ಥಿತವಾಗಿ ಕೆಲಸ ಮಾಡಿರುವುದಕ್ಕೆ ಸಾಕಷ್ಟು ಸಾಕ್ಷಿಗಳಿವೆ. ಮುಸ್ಲಿಂರನ್ನು ಹೊಡೆದೋಡಿಸುವ ಒಂದು ಅಲೆ ಗ್ರಾಮೀಣ ಪ್ರದೇಶಗಳಿಗೆ ಬೀಸಿರುವುದು ಸ್ಪಷ್ಟವಾಗಿ ಮೊದಲಬಾರಿಗೆ ವ್ಯಕ್ತವಾಗಿದೆ. ಗುಜರಾತಿನ ಸ್ಥಳೀಯ ಭಾಷೆಯ ಕೆಲವು ಪತ್ರಿಕೆಗಳು ಮಹಿಳೆಯರ ಮೇಲೆ ಲೈಂಗಿಕ ಹಿಂಸೆಯನ್ನು ಪ್ರಚೋದಿಸುವಲ್ಲಿ, ಹಿಂಸಾಚಾರವನ್ನು ಮುಂದುವರೆಸುವಂತೆ ಪ್ರಚೋದಿಸುವಲ್ಲಿ ಅಪಾಯಕಾರಿ ಹಾಗೂ ಅಪರಾಧಿ ಪಾತ್ರವನ್ನು ವಹಿಸಿರುವುದು ಕಂಡು ಬರುತ್ತಿದೆ.

ಏಳು ಜನ ಮಹಿಳೆಯರನ್ನೊಳಗೊಂಡ ಸತ್ಯಶೋಧನೆಯ ಗುಂಪು ಆಶ್ರಯ ತಾಣಗಳಲ್ಲಿ ಭೇಟಿಯಾದ ಮಹಿಳೆಯರ ಅನುಭವಗಳನ್ನು ಅವರ ಮಾತುಗಳಲ್ಲೇ ದಾಖಲಿಸಿದ್ದಾರೆ. ಅವರು ದಾಖಲಿಸಿದ ಹಲವು ಘಟನೆಗಳು ಹೀಗಿವೆ:

ನರೋದ ಪಾಟಿಯ ಜಿಲ್ಲೆಯಲ್ಲಿ ಹಲವಾರು ಮಹಿಳೆಯರ ಮೇಲೆ ಗುಂಪು ಅತ್ಯಾಚಾರ ನಡೆದಿರುವುದಲ್ಲದೇ ಅತ್ಯಂತ ಚಿಕ್ಕ ಹುಡುಗಿಯರ ಮೇಲೆ

ಕೂಡಾ ಅತ್ಯಾಚಾರ ನಡೆಸಲಾಗಿದೆ.

'ಶಾ ಈ ಅಲಮ್' ಆಶ್ರಿತ ತಾಣದಲ್ಲಿ ಇದ್ದ ಕುಲಸಮ್ ಬೀಬಿ (ಮಾರ್ಚ್ 27, 2002ರಲ್ಲಿ) ಹೇಳುವ ಪ್ರಕಾರ:

''ಗಂಗೋತ್ರಿ ಸೊಸೈಟಿಯನ್ನು ಬಿಡುವಂತೆ ನಮಗೆ ಒತ್ತಾಯ ಮಾಡಿದ ನಂತರ ಜನರ ದಂಡು ಉರಿಯುವ ಟೈರುಗಳಿಂದ ನಮ್ಮನ್ನು ಅಟ್ಟಿಸಿಕೊಂಡು ಬರತೊಡಗಿದರು. ಈ ಸಮಯದಲ್ಲಿ ಅವರು ಬಹಳ ಹುಡುಗಿಯರ ಮೇಲೆ ಅತ್ಯಾಚಾರವೆಸಗಿದರು. ನಾವು 8-10 ಅತ್ಯಾಚಾರದ ಪ್ರಕರಣಗಳನ್ನು ನೋಡಿದೆವು. 16 ವರ್ಷದ ಮೆಹರುನ್ನೀಸಾಳನ್ನು ಬೆತ್ತಲೆಗೊಳಿಸಿದ್ದನ್ನೂ ನಾವು ಕಂಡೆವು. ಅವರು ತಾವೇ ಬೆತ್ತಲಾಗಿ ಹುಡುಗಿಯರನ್ನು ಕರೆಯುತ್ತಿದ್ದರು. ನಂತರ ದಾರಿಯಲ್ಲೇ ಅವರ ಮೇಲೆ ಅತ್ಯಾಚಾರವೆಸಗಿದರು. ಒಬ್ಬ ಹುಡುಗಿಯ ಯೋನಿ ಹರಿದು ರಕ್ತ ಸುರಿಯುವುದನ್ನು ನಾವು ಕಂಡೆವು. ಅನಂತರ ಅವರನ್ನು ಬೆಂಕಿಯಲ್ಲಿ ದಹಿಸಲಾಯಿತು. ಈಗ ಅದಕ್ಕೆ ಯಾವ ಸಾಕ್ಷಿಯೂ ಇಲ್ಲ''.

ಅಜರುದ್ದೀನ್, 13 ವರ್ಷದ ಹುಡುಗ ಗಂಗೋತ್ರಿಯ ಸೊಸೈಟಿಯ ಟೆರೇಸ್ ಮೇಲೆ ಅಡಗಿಕೊಂಡವನು ಅಲ್ಲಿಂದಲೇ ಅತ್ಯಾಚಾರವನ್ನು ವೀಕ್ಷಿಸಿದನು. ಅವನು ಹೇಳುವ ಪ್ರಕಾರ:

''ಫರ್‌ಜಾನಾಳನ್ನು ಗುಡ್ಡು ದಾದಾ ಅತ್ಯಾಚಾರವೆಸಗಿದ್ದನ್ನು ನಾನು ನೋಡಿದೆ. ಫರ್‌ಜಾನಾ 13 ವರ್ಷದವಳು. ಹುಸೇನ್ ನಗರದಲ್ಲಿ ವಾಸವಾಗಿದ್ದಳು. ಅವರು ಒಂದು ರಾಡನ್ನು ಫರ್‌ಜಾನಾಳ ಹೊಟ್ಟೆಗೆ ಹಾಕಿದರು. ಅನಂತರ ಅವಳನ್ನು ಸುಟ್ಟುಬಿಟ್ಟರು. 12 ವರ್ಷದ ನೂರಜಹಾನಳನ್ನು ಅತ್ಯಾಚಾರಕ್ಕೊಳಪಡಿಸಿದರು. ಅವಳ ಅತ್ಯಾಚಾರ ಮಾಡಿದವರು ಗುಡ್ಡು, ಸುರೇಶ್, ನರೇಶ ಚಾರಾ, ಮತ್ತು ಹರಿಯ. ನಾನು ರಾಜ್ಯದ ಸಾರಿಗೆ ಇಲಾಖೆಯಲ್ಲಿ ಕೆಲಸ ಮಾಡುವ ಭವಾನಿಸಿಂಗ್ 5 ಜನರನ್ನು ಹಾಗೂ ಒಬ್ಬ ಹುಡುಗನನ್ನು ಕೊಂದಿರುವುದನ್ನು ನೋಡಿದೆ''.

ಅಹಮದಾಬಾದ್‌ನ ನರೋದ್ ಪಾಟಿಯಾದ ಹುಸೇನ್ ನಗರದ 25 ವರಷದ ಜರೀನಾಳ ಮೇಲೆ ನಡೆದ ಗುಂಪು ಅತ್ಯಾಚಾರವನ್ನು ಆಕೆಯ 30 ವರುಷದ ಗಂಡ ನಯಿಮುದ್ದೀನ್ ಇಬ್ರಾಹಿಂ ಶೇಕ್ 'ಶಾ ಈ ಅಲಮ್' ಆಶ್ರಿತ ತಾಣದಲ್ಲಿ ಹೇಳಿದ ಪ್ರಕಾರ:

''ಫೆಬ್ರುವರಿ 28ರ ಬೆಳಿಗ್ಗೆ ಅದು ಪ್ರಾರಂಭವಾಯಿತು. ಆ ಸಮಯದಲ್ಲಿ ಜನರ ದಂಡು ಮುಸ್ಲಿಂರನ್ನು ಹೊರಗೆಳೆಯಿರಿ ಎಂದು ಘೋಷಣೆ ಕೂಗುತ್ತಾ ಬಂದರು. ಅವರಲ್ಲಿ ಸುಮಾರು ಜನ ಕೇಸರಿ ಚಡ್ಡಿಗಳನ್ನು ಹಾಕಿಕೊಂಡಿದ್ದರು. ಅಲ್ಲಿದ್ದವರಲ್ಲಿ ಪಕ್ಕದ 'ಗೋಪಿನಾಥ ಸೊಸೈಟಿ' ಹಾಗೂ 'ಗಂಗೋತ್ರಿ ಸೊಸೈಟಿ'ಯ ಹುಡುಗರೂ ಸೇರಿದ್ದರು. ನಾನು ನನ್ನ ಕುಟುಂಬದ ಎಲ್ಲರೊಡನೆ- ತಾಯಿ, ತಂದೆ, ತಂಗಿ, ತಂಗಿಯ ಮಗಳು, ನನ್ನ ಹೆಂಡತಿ ಜರೀನಾ, ನನ್ನ ತಮ್ಮ, ನಾದಿನಿ, ನನ್ನ ಅಕ್ಕನ ಮಗಳು, ಹೀಗೆ ನಾವು ಹನ್ನೊಂದು ಜನ ಪೋಲೀಸ್ ಚೌಕಿಯತ್ತ ಓಡತೊಡಗಿದೆವು, ಪೋಲೀಸರು ಹೇಳಿದರು, ನೀವು ಗೋಪಿನಾಥ ಹಾಗೂ ಗಂಗೋತ್ರಿಯ ಕಡೆಗೆ ಹೋಗಿ. ಆ ಗಲಾಟೆಯಲ್ಲಿ ನಾನು ಹಾಗೂ ನನ್ನ ಹೆಂಡತಿ ಬೇರೆಯಾಗಿದ್ದೆವು. ಅವಳಿಗೆ ಏನಾಯಿತೋ, ಆನಂತರ ಆಕೆ ನನಗೆ ಹೇಳಿದಳು ಗೋಡೆಯೊಂದನ್ನು ಹಾರುವ ಮೂಲಕ ಆಕೆ ಗುಂಪಿನ ಕೈಯಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಿದಳು. ಆದರೆ ಆಕೆಯನ್ನು ಅವರು ಕುಲ್-ಡೆ-ಸಾಕ್‌ನಲ್ಲಿ ಕಂಡರು. ಆಕೆಯ ಮೇಲೆ ಗುಂಪು ಅತ್ಯಾಚಾರ ನಡೆಸಿದರು. ಆಕೆಯ ಒಂದು ಭುಜ ಕತ್ತರಿಸಿದರು. ಆಕೆ ಬೆತ್ತಲೆಯಾಗಿ ಇದ್ದಳು. ಆಕೆಯನ್ನು ಸಿವಿಲ್ ಆಸ್ಪತ್ರೆಯಲ್ಲಿ ಬಹಳ ದಿನಗಳವರೆಗೆ ಇಡಲಾಗಿತ್ತು. ಆಕೆ ಈಗ ಕಾನ್‌ಪುರದ ದಾರ್‌ವಾಜ್‌ದಲ್ಲಿ ತನ್ನ ತಾಯಿಯೊಂದಿಗಿದ್ದು ಚೇತರಿಸಿಕೊಳ್ಳುತ್ತಿದ್ದಾಳೆ.''

ಸಾಯಿರಾ ಬಾನು, ನರೋದ್ ಪಾಟಿಯ (ಶಾ-ಇ-ಅಲಮ್ ಆಶ್ರಿತ ತಾಣದಲ್ಲಿ ಮಾರ್ಚ್ 27, 2002 ರಂದು ರೆಕಾರ್ಡ್ ಮಾಡಿದ್ದು) ಇವರು ವರದಿಯ ಲೇಖಕಿಯರಲ್ಲಿ ಹೇಳಿದ ಕತೆ ಧಾರುಣವಾದದ್ದು. ಈ ಕತೆಯನ್ನು ಸತ್ಯ ಶೋಧನೆಯ ಸಂದರ್ಭದಲ್ಲಿ ಹಲವಾರು ಬಾರಿ ವರದಿಯ ಲೇಖಕಿಯರು ಕೇಳಿಸಿಕೊಂಡಿದ್ದಾರೆ. ಶಾ-ಇ-ಅಲಮ್ ಆಶ್ರಯತಾಣದಲ್ಲಿ ಹಿಂಸೆಗೊಳಗಾಗಿ ಬದುಕುಳಿದ ಹಲವಾರು ಮಹಿಳೆಯರು ಈ ಕತೆಯನ್ನು ಹೇಳುತ್ತಾರೆ. ವಿವರಗಳು ಭಿನ್ನವಾಗಿದ್ದರೂ ಕಥೆ ಒಂದೇ. ಸಾಯಿರಾ ಬಾನು ಹೇಳಿಕೆಯ ಪ್ರಕಾರ:

''ನನ್ನ ನಾದಿನಿ ಕೌಸರ್ ಬಾನುಗೆ ಅವರು ಮಾಡಿದ್ದು ಹೀನಾಯವಾದುದು ಮತ್ತು ಭಯಂಕರವಾದುದು. ಆಕೆ ಒಂಭತ್ತು ತಿಂಗಳ ಬಸಿರಿ, ಅವರು ಆಕೆಯ ಹೊಟ್ಟೆಯನ್ನು ಕತ್ತರಿಸಿ ಬಗೆದು, ಆಕೆಯ ಗರ್ಭದಲ್ಲಿದ್ದ ಭ್ರೂಣವನ್ನು

ಕತ್ತಿಯಿಂದ ಹೊರ ತೆಗೆದು ಉರಿಯುತ್ತಿರುವ ಬೆಂಕಿಗೆ ಎಸೆದರು. ನಂತರ ಆಕೆಯನ್ನು ಸುಟ್ಟು ಹಾಕಿದರು''. ಈ ಕಥೆಯ ವಿವರಗಳು ಬೇರೆ ಬೇರೆಯವರ ಬಾಯಲ್ಲಿ ಭಿನ್ನವಾಗಿದ್ದವು. 'ಭ್ರೂಣವನ್ನು ನೆಲಕ್ಕೆ ಅಪ್ಪಳಿಸಲಾಯಿತು', 'ಭ್ರೂಣವನ್ನು ಕತ್ತಿಯಿಂದ ಸೀಳಲಾಯಿತು', 'ಭ್ರೂಣವನ್ನು ಕತ್ತಿಯಿಂದ ಮೇಲೆ ಎಸೆದು ನಂತರ ಬೆಂಕಿಯಲ್ಲಿ ಎಸೆಯಲಾಯಿತು'. ಈ ರೀತಿ ವಿವರಗಳು ಭಿನ್ನವಾದರೂ ಕಥೆ ಒಂದೇ. ಕಥೆ ಹೇಳುವ ಪ್ರತಿಯೊಬ್ಬರೂ ಇದು ತಮ್ಮದೇ ನೋವೆಂಬಂತೆ ಹಂಚಿಕೊಳ್ಳುತ್ತಾರೆ. ತಮ್ಮದೇ ನೋವೆಂಬಂತೆ ಅನುಭವಿಸಿ ಹೇಳುತ್ತಾರೆ. ಹಿಂಸೆಗೊಳಗಾಗಿ ಭ್ರಮೆ ಕಳೆದು ಕೂಡ ಮನಸ್ಸುಗಳ ಕಲ್ಪನೆಗಳೇ ಇವು? ಕೌಸರ್ ಕಥೆ - ಫೆಬ್ರುವರಿ 28, 2002ರಂದು ನರೋದ್ ಪುಟಿಯಾದ ಮುಸ್ಲಿಂರು ಅನುಭವಿಸಿದ ದುರಂತಗಳಲ್ಲಿ ಅತ್ಯಂತ ಭೀಕರ ದುರಂತವಾಗಿದೆ. ಅವರೆಲ್ಲರ ದುರಂತದ ಅನುಭವಗಳ ಮೊತ್ತ ಇದಾಗಿದೆ. ಕೌಸರ್ ನೋವು-ಸಮುದಾಯದ ಒಗ್ಗೂಡಿದ ನೋವಾಗಿದೆ. ಇದು ಹಿಂಸೆಯ ಕ್ರೂರತೆಯ ಕ್ರೂಡೀಕೃತಗೊಂಡ ಒಂದು ಸಂಕೇತವಾಗಿದೆ. ಈ ಸಂಕೇತ ನಿರಪರಾಧಿಗಳ ಅಸಾಹಕತೆಯ ಸಂಕೇತವಾಗಿದೆ. ಈ ರೀತಿಯ ಸಾವಿರಾರು ಕೌಸರ್‌ಗಳು ಗುಜರಾತಿನಲ್ಲಿ ಮೌನವಾಗಿ ನೋವನ್ನುಣ್ಣುತ್ತಿದ್ದಾರೆ.

ಅನೇಕ ಕಾರ್ಯಕರ್ತೆಯರು ಅತ್ಯಾಚಾರಕ್ಕೊಳಗಾಗಿ ಉಳಿದ ಹೆಂಗಸರ ಜೊತೆ ಆಶ್ರಯ ತಾಣಗಳಲ್ಲಿ ಕೆಲಸ ಮಾಡುತ್ತಿದ್ದಾರೆ. ನಸೀಮ ಹಾಗು ಮಹಮೂದ್ ಇವರು ಮಿಲಿತ್ ನಗರದವರು. ಇವರು 'ಸರ್ವದು' ಎಂಬ ಸ್ವಯಂ ಸೇವಾ ಸಂಸ್ಥೆಯಲ್ಲಿ ಕೆಲಸ ಮಾಡುತ್ತಿದ್ದಾರೆ. ಇವರು ಈಗ 'ಶಾ-ಈ ಅಲಮ್' ಶಿಬಿರದಲ್ಲಿ ಕೆಲಸ ಮಾಡುತ್ತಿದ್ದಾರೆ. ಅವರು ಹೇಳಿದ ಪ್ರಕಾರ ಈ ಆಶ್ರಯ ತಾಣಕ್ಕೆ ಹೆಂಗಸರು ಹೆಚ್ಚು-ಕಡಿಮೆ ಬೆತ್ತಲೆಯಾಗಿಯೇ ಬರುತ್ತಾರೆ. ಗಂಡಸರು ತಮ್ಮ ಅಂಗಿಗಳನ್ನು ಬಿಚ್ಚಿ ಹೆಂಗಸರ ಬೆತ್ತಲೆತನ ಮುಚ್ಚುವುದಕ್ಕೆಂದು ಕೊಡುತ್ತಿದ್ದರು. ಗುಂಪು ಅತ್ಯಾಚಾರಕ್ಕೆ ಬಲಿಯಾದ ಕೆಲವರ ಗುಪ್ತಾಂಗ ಹರಿದು ನಡೆಯುವುದಕ್ಕೂ ಆ ಮಹಿಳೆಯರು ಕಷ್ಟಪಡುತ್ತಿದ್ದರು. ಇವರೊಂದಿಗೆ ಮಾತನಾಡುವಾಗ ವರದಿಯ ಲೇಖಕಿಯರು ಆಶ್ರಯ ತಾಣದಲ್ಲಿ ಜುಬೇದ ಆಪಾ ಅವರನ್ನು ಬೇಟಿಯಾದರು. ಆಕೆ ಹುಡುಗಿಯರು ಗುಂಪು ಅತ್ಯಾಚಾರಕ್ಕೆ ಬಲಿಯಾಗಿರುವುದನ್ನು ಕಣ್ಣಾರೆ ನೋಡಿದ್ದಳು. ಆಕೆಯ ಯಾತನೆ ಆಕೆಯ ಮುಖದ ಮೇಲೆ ಅಚ್ಚೊತ್ತಿತ್ತು. ನಜ್ಮ ಬಾನು ಎಂಬ ಮಹಿಳೆಯನ್ನು ಈ ತಾಣಕ್ಕೆ ಕರೆತಂದಾಗ ಆಕೆ ಪ್ರಜ್ಞಾಹೀನಳಾಗಿದ್ದಳು. ಆಕೆಯ ದೇಹದ ಮೇಲೆ ಕಚ್ಚಿದ್ದ ಹಾಗೂ ಉಗುರಿನ ಗುರುತುಗಳಿದ್ದವು. ಆಕೆಗೆ ರಕ್ತಸ್ರಾವವಾಗುತ್ತಿತ್ತು. ಮರದ ತುಂಡುಗಳನ್ನು ಆಕೆಗೆ ಡ್ರೆಸಿಂಗ್ ಮಾಡಿದ ಹೆಂಗಸರು ಆಕೆಯ ಯೋನಿಯಿಂದ ತೆಗೆದಿದ್ದರು. ನಜ್ಮಾ ಬಾನು ಆಕೆಯ ಕತೆಯನ್ನು ಹೇಳಲಾರದಷ್ಟು ಭೀತಳಾಗಿದ್ದಳು. ಆಕೆಯನ್ನು ಗಂಗೋತ್ರಿ ಸೊಸೈಟಿಯಿಂದ ಪುರುಷರು ಒಡಿಸಿಕೊಂಡು ಬಂದದಷ್ಟೇ ಆಕೆಗೆ ನೆನಪಿದ್ದ ವಿಚಾರ.

ನರೋದ ಪಾಟಿಯ, ಫೆಬ್ರುವರಿ 28, 2002.

'ಜನ್ನತ್ ಶೇಖ್, ಸಿಟಿಜನ್ಸ್ ಇನಿಷಿಯೇಟಿವ್' ಗೆ ಹೇಳಿದ ಪ್ರಕಾರ :

ಆಗ 6-30 ರ ಸಂಜೆ, ಜನರ ದಂಡು ನನ್ನ ಗಂಡನನ್ನು ಹಿಡಿದಕೊಂಡು ಅವನ ತಲೆಯ ಮೇಲೆ ಕತ್ತಿಯಿಂದ ಎರಡು ಬಾರಿ ಹೊಡೆದರು. ನಂತರ ಅವರು ಆತನ ಕಣ್ಣುಗಳಲ್ಲಿ ಪೆಟ್ರೋಲ್ ಸುರಿದು ಆತನನ್ನು ಬೆಂಕಿಯಿಂದ ದಹಿಸಿದರು. ನನ್ನ ನಾದಿನಿಯನ್ನು ಬೆತ್ತಲೆಗೊಳಿಸಿ ಅತ್ಯಾಚಾರವೆಸಗಿದರು. ಆಕೆಯ ಮಡಿಲಲ್ಲಿ 3 ತಿಂಗಳ ಮಗುವಿತ್ತು. ಅವರು ಆಕೆಯ ಮೇಲೆ ಪೆಟ್ರೋಲ್ ಸುರಿದು ಮಗುವನ್ನು ಆಕೆಯ ಮಡಿಲಿಂದ ಎತ್ತಿಕೊಂಡು ಬೆಂಕಿಯಲ್ಲಿ ಎಸೆದರು. ನನ್ನ ಮೈದುನನಿಗೂ ತಲೆಯ ಮೇಲೆ ಕತ್ತಿಯಿಂದ ಹೊಡೆದು ಬೆಂಕಿಯಲ್ಲಿ ಎಸೆದರು. ಆ ಸಂದರ್ಭದಲ್ಲಿ ಕಟ್ಟಡವೊಂದರ ಟೆರೇಸಿನ ಮೇಲೆ ನಾವು ಅಡಗಿಕೊಂಡಿದ್ದೆವು. ನನ್ನ ಅತ್ತೆಗೆ ಮೆಟ್ಟಲು ಹತ್ತಿ ಬರಲಿಕ್ಕಾಗದಿದ್ದರಿಂದ ಆಕೆ ಕೆಳಗಿನ ನೆಲ ಮಳಿಗೆಯಲ್ಲಿ ತನ್ನ ನಾಲ್ಕು ವರ್ಷದ ಮೊಮ್ಮಗನೊಂದಿಗೆ ಇದ್ದಳು. ಹಣ ಬೇಕಿದ್ದರೆ ತೆಗೆದುಕೊಂಡು ಹೋಗಿ, ಆದರೆ ಮಕ್ಕಳನ್ನು ಉಳಿಸಿ ಎಂದು ಆಕೆ ಅವರಿಗೆ ಹೇಳಿದಳು. ಅವರು ಹಣ, ಒಡವೆ ತೆಗೆದುಕೊಂಡರು. ನಂತರ ಮಕ್ಕಳ ಮೇಲೆ ಪೆಟ್ರೋಲ್ ಸುರಿದು ದಹಿಸಿದರು. ನನ್ನ ಅತ್ತೆಯ ಮೇಲೆ ಅತ್ಯಾಚಾರವೆಸಗಿದರು. ನಾನು ಇದನ್ನೆಲ್ಲ ಕಣ್ಣಾರೆ ನೋಡಿದೆ. ನನ್ನ ಬೀದಿಯ ಮದುವೆಯಾಗದಿರುವ ಹುಡುಗಿಯರನ್ನು ಬೆತ್ತಲೆಗೊಳಿಸಿ, ಅತ್ಯಾಚಾರ ಮಾಡಿ, ಜೀವಂತ ದಹನ ಮಾಡಿದರು. 14 ವರ್ಷದ ಹುಡುಗಿಯೊಬ್ಬಳನ್ನು ಕಬ್ಬಿಣದ ಸಲಾಕೆಯಿಂದ ಆಕೆಯ ಹೊಟ್ಟೆಗೆ ಹಾಕುವ ಮೂಲಕ ಕೊಲ್ಲಲಾಯಿತು. 2-30ರ ಮುಂಜಾನೆ ಇದೆಲ್ಲ ಮುಗಿದಿತ್ತು. ಅನಂತರ ಅಂಬುಲೆನ್ಸ್‌ನಲ್ಲಿ ನಾನು ಗಂಡ, ಮಕ್ಕಳ ದೇಹಗಳ ಪಕ್ಕ ಕುಳಿತಿದ್ದೆ. ನನ್ನ ತೊಡೆಗಳು ಹಾಗು ಎಡಗೈನಲ್ಲಿ ಗಾಯದ ಗುರುತುಗಳಿವೆ. ಇವು ಪೋಲೀಸರ ಹೊಡೆತದಿಂದ ಆದದ್ದು.

ನನ್ನ ಗಂಡ 45% ಹಾಗೂ ನನ್ನ ಮಗಳು 95% ಗಾಯದಿಂದಾಗಿ ಆಸ್ಪತ್ರೆಯಲ್ಲಿ ಮೂರು ದಿನದ ನಂತರ ಸತ್ತರು. ಪೋಲೀಸರು ಗಲಾಟೆಯ ಸ್ಥಳದಲ್ಲಿ ಇದ್ದರು, ಆದರೆ ಅವರು ಜನರ ದಂಡಿಗೆ ಸಹಾಯನೀಡುತ್ತಿದ್ದರು. ನಾವು ಅವರ ಕಾಲಿಗೆ ಬಿದ್ದೆವು. ಆದರೆ ಸಹಾಯ ಮಾಡಬಾರದೆಂದು ತಮಗೆ ಮೇಲಿನಿಂದ ಆದೇಶ ಬಂದಿದೆ ಎಂದು ಅವರು ನುಡಿದರು. ಟೆಲಿಫೋನ್ ವೈರುಗಳನ್ನು ತುಂಡರಿಸಿದ್ದರಿಂದ ನಾವು 'ಫೈರ್ ಬ್ರಿಗೇಡ್'ಗೆ ಕೂಡಾ ಮಾಹಿತಿ ನೀಡಲಾಗಲಿಲ್ಲ.

ಈ ಮೇಲ್ಕಂಡ ಘಟನೆಗಳು ನರೋದ ಪಾಟಿಯಲ್ಲಿ ನಡೆದವು. ಅಲ್ಲಿಯ ಬಿ.ಜೆ.ಪಿ. ಎಂ.ಎಲ್.ಎ ಮಾಯಾ ಕೊಡನಾನಿ ಈ ಬಗ್ಗೆ ನಿರ್ಲಿಪ್ತರಾಗಿದ್ದರಲ್ಲದೇ ನಿರ್ವಿಕಾರರಾಗಿದ್ದರು. 'ಹೀಗೆ ನಡೆದಿದೆಯೇ'! ಎಂಬಂತೆ ಆಶ್ಚರ್ಯಪಟ್ಟರು. ಅತ್ಯಾಚಾರ ಪ್ರಕರಣಗಳ ಬಗ್ಗೆ ಆಕೆಯನ್ನು ಕೇಳಿದಾಗ, ''ಇದು ಸತ್ಯಾನಾ? ಒಬ್ಬ ಪೋಲೀಸ್ ನನಗೆ ಹೇಳಿದ ಈ ತರಹದ್ದನ್ನು ನಾನು ನೋಡಿಲ್ಲ ಅಂತ''. ಆಕೆ ಈ ಬಗ್ಗೆ ತನಿಖೆ ನಡೆಸುವ ಬಗ್ಗೆ ಯಾವ ಆಸಕ್ತಿಯನ್ನು ತೋರಿಸಿಲ್ಲ. ರಾಷ್ಟ್ರೀಯ ಮಹಿಳಾ ಆಯೋಗ ಸಹ ಗುಜರಾತಿಗೆ ಈ ವರದಿಗಾರರು ಅಲ್ಲಿಗೆ ಹೋಗುವವರೆಗೆ ಹೋಗಿದ್ದಿಲ್ಲ. ಯಾವುದೇ ಸಾಂಸ್ಥಿಕ ರಚನೆಯ ನೆರವೂ ಕೂಡ ಈ ಹಿಂಸೆಗೊಳಗಾದ ಮಹಿಳೆಯರಿಗೆ ದೊರೆತಿಲ್ಲ. ಪಂಚಮಹಲ್‌ನ ಜಿಲ್ಲಾಧಿಕಾರಿಯನ್ನು ಈ ಬಗ್ಗೆ ಕೇಳಿದಾಗ, ''ಕಾನೂನನ್ನು ಸುವ್ಯವಸ್ಥಿತವಾಗಿ, ಹದ್ದು ಬಸ್ತಿನಲ್ಲಿಡುವುದು ನನ್ನ ಪ್ರಾಥಮಿಕ ಕಾಳಜಿ. ಲೈಂಗಿಕ ಹಿಂಸಾಚಾರದ ಬಗ್ಗೆ ಕ್ರಮತೆಗೆದುಕೊಳ್ಳುವುದು ನನಗೆ ಸಾಧ್ಯವಿಲ್ಲ. ನನ್ನ ಗಮನಕ್ಕೆ ಬಂದರೆ ನಾನು ಕ್ರಮ ಜರುಗಿಸಬಲ್ಲೆ. ಅದಕ್ಕಿಂತ ಹೆಚ್ಚಿನದೇನನ್ನು ಮಾಡಲಾಗುವುದಿಲ್ಲ. ಸ್ವಯಂ ಸೇವಾ ಸಂಸ್ಥೆಗಳು ಈ ಕೆಲಸ ಮಾಡಬೇಕು. ಅವರು ಇದರಲ್ಲಿ ತೊಡಗಿಸಿಕೊಳ್ಳುವುದನ್ನು ನಾನು ಸ್ವಾಗತಿಸುತ್ತೇನೆ''.

ಲೈಂಗಿಕ ಹಿಂಸಾಚಾರವನ್ನು ನರೋದ್ ಪಾಟಿಯಾದಲ್ಲಿ ಮಾತ್ರವಲ್ಲ, ಪಂಚಮಹಲ್ ಜಿಲ್ಲೆಯ ಹಳ್ಳಿಗಳಲ್ಲಿ, ದಹೋದ್ ಜಿಲ್ಲೆಯ ಹಳ್ಳಿಗಳಲ್ಲಿ, ಸಬ್ರಕಾಂತ ಜಿಲ್ಲೆಯ ಹಳ್ಳಿಗಳಲ್ಲಿ ಕೂಡಾ ಕಂಡುಬಂದಿವೆ. ಅನೇಕ ಮಹಿಳೆಯರು ಸತ್ಯಶೋಧನೆಯ ವರದಿಯ ಲೇಖಕಿಯರೊಡನೆ ಇದೇ ರೀತಿಯ ಅನುಭವಗಳನ್ನು ಹಂಚಿಕೊಂಡಿದ್ದಾರೆ.

ಪುಟ್ಟ ಪುಟ್ಟ ಮಕ್ಕಳಿಗೆ ಈ ದುರ್ಘಟನೆ ಯಾವ ಪರಿಣಾಮ ಬೀರಬಹುದು? ಸಾಯಿರಾ - 12 ವರ್ಷ; ಅಫ್‌ಸಾನಾ -11, ನೈನಾ-12, ಅಂಜು-12, ರುಕ್‌ಸುತ್-9, ನಿಲೋಫರ್-10, ನಿಲೋಫರ್-9, ಹೇನಾ-11.

ನರೋದ್ ಪಾಟಿಯದಲ್ಲಿ ನಡೆದ ದುಷ್ಕೃತ್ಯಗಳಲ್ಲಿ ಬಲಿಯಾಗಿ ಉಳಿದ ಈ ಹಸುಗೂಸುಗಳು ನಡೆದುದನ್ನು ನಂಬಲೂ ಅಸಾಧ್ಯ ಎಂಬಂತೆ ಭಾವಿಸುತ್ತಾರೆ. ಜೀವದ ಭಯ, ಸಾವಿನ ಭಯ ಅವರಿಗೆ ಅಂಟಿಕೊಂಡಿದೆ. ಹಿಂದೂಗಳ ಬಗ್ಗೆ ಅವರಿಗಿದ್ದ ನಂಬಿಕೆ ಮುರಿದು ಹೋಗಿದೆ. ಅವರು ಕೆಟ್ಟ ಹಿಂದೂಗಳ ಬಗ್ಗೆ ಮಾತನಾಡುತ್ತಾರೆ. ಅವರ ಮನೆಯನ್ನು ಸುಟ್ಟ ಹಾಗೂ ಅವರನ್ನು ತಪ್ಪಿಸಿಕೊಂಡು ಹೋಗಲು ಬಿಡದ ಹಿಂದೂಗಳ ಬಗ್ಗೆ ಅವರು ಮಾತನಾಡುತ್ತಾರೆ.

ಮಕ್ಕಳು ನೋಡಬಾರದ್ದನ್ನು ಈ ಕೆಲವು ಮಕ್ಕಳು ತಮ್ಮ ಕಣ್ಣಿನಿಂದ ನೋಡಿವೆ. ಕೆಲವು ಕೇಳಿಸಿಕೊಂಡಿವೆ. ಹಿಂದೂಗಳು ಕೆಟ್ಟದ್ದನ್ನು ಮಾಡಿದ್ದಾರೆ ಎನ್ನುತ್ತಾರೆ. ಕೆಟ್ಟದ್ದು ಎಂಬ ಪದವನ್ನು ಅತ್ಯಾಚಾರಕ್ಕೆ ಪರ್ಯಾಯವಾಗಿ ಇವರು ಬಳಸುತ್ತಾರೆ. ಇದನ್ನು ಹೇಳುವಾಗ ಅವರ ಕಣ್ಣುಗಳು ಎತ್ತಲೋ ತೇಲುತ್ತವೆ. ಒಬ್ಬರ ಕಣ್ಣುಗಳನ್ನೊಬ್ಬರು ನೋಡುತ್ತಾರೆ. ಅವರಿಗೆ ಅರ್ಥವಾಗಿರುವುದನ್ನು ಮೂಕವಾಗಿ ಒಬ್ಬರಿಗೊಬ್ಬರು ನೋಡುವ ಮೂಲಕ ಸ್ಪಷ್ಟಪಡಿಸಿಕೊಳ್ಳುತ್ತಾರೆ.

'ಬಲತ್ಕಾರ' ಈ ಪದ ಅವರಿಗೆ ಗೊತ್ತು. 'ನಾನು ಹೇಳುತ್ತೇನೆ' ಎಂದು 9 ವರಷದ ಹುಡುಗ ಹೇಳಿದ. ''ಬಲತ್ಕಾರ ಎಂದರೆ ಹೆಂಗಸನ್ನು ಬೆತ್ತಲೆಗೊಳಿಸುವುದು ನಂತರ ಸುಡುವುದು'', ನಂತರ ಆತ ನೆಲದ ಕಡೆಗೆ ದೃಷ್ಟಿಸಿ ನೋಡತೊಡಗಿದ. ಮಕ್ಕಳು ನಡೆದುದನ್ನು ಹಾಗೆಯೇ ಹೇಳಬಲ್ಲರು. ನರೋದ್ ಪಾಟಿಯಾದಲ್ಲಿ ನಡೆದಿರುವುದೆಲ್ಲ ಹೀಗೆಯೇ. ಹೆಂಗಸನ್ನು ಬೆತ್ತಲೆಗೊಳಿಸಿ, ಅತ್ಯಾಚಾರವೆಸಗಿ ನಂತರ ಬೆಂಕಿಯಲ್ಲಿ ಸುಟ್ಟ ಹಾಕುವುದು.

ದಹಿಸುವುದು - 'ಅತ್ಯಾಚಾರ' ಪದದ ಅರ್ಥದ ಅವಿಭಾಜ್ಯ ಅಂಗವಾಗಿದೆ!

- ಗುಜರಾತಿನಲ್ಲಿ ಹಳ್ಳಿಗಾಡು ಪ್ರದೇಶದ ಮುಸ್ಲಿಂ ಮಹಿಳೆಯರು ಮೊದಲಬಾರಿಗೆ ಕೋಮುವಾದದ ದಳ್ಳುರಿಗೆ ಒಳಗಾಗಿದ್ದಾರೆ. ಇದನ್ನು ಕುರಿತು ಪಂಚಮಹಲ್‌ನ ಮಹಿಳೆಯೊಬ್ಬಳು ''ಯುದ್ಧ ಪ್ರಾರಂಭವಾಗಿದೆ'' ಎಂದಳು. ಹಳ್ಳಿಯ ಮುಸ್ಲಿಂ ಮಹಿಳೆಯರು ತಮ್ಮ ನಂಬಿಕೆ, ವಿಶ್ವಾಸಕ್ಕೆ ಮೋಸವೆಸಗಿದ್ದಾರೆ ಎಂಬ ಭಾವನೆ ತಲೆದೋರಿದೆ. ತಮ್ಮ

ಪಕ್ಕದವರಿಂದ, ಸ್ನೇಹಿತರಿಂದ, ತಾವು ಜೊತೆಗೆ ಬದುಕಿದ್ದವರಿಂದ, ತಾವು ಜೊತೆಗೆ ಹಬ್ಬ ಆಚರಿಸಿದವರಿಂದ, ಜೊತೆಗೆ ವ್ಯವಹಾರ ಮಾಡಿದವರಿಂದ ಮೋಸಕ್ಕೆ ಒಳಗಾದ ಭಾವನೆ ಇವರಿಗಿದೆ. ಈ ಜನರೇ ಹೊರಗಡೆಯ ಜನರ ದಂಡಿನೊಡನೆ ಸೇರಿ ಲೂಟಿ ನಡೆಸಿದ್ದಾರೆ, ಕೊಂದಿದ್ದಾರೆ, ಹಾಗೂ ಮುಸ್ಲಿಂರ ಮನೆ, ಕುಟುಂಬಗಳನ್ನು ದಹಿಸಿದ್ದಾರೆ. ಮೊದಲಿದ್ದ ವಿಶ್ವಾಸ, ನಂಬಿಕೆ ಮತ್ತು ಕಟ್ಟಲು ಸಾಧ್ಯವೆ?

ಹಳ್ಳಿಗಾಡುಗಳು ಆಶ್ರಯ ತಾಣಗಳು ಅಲ್ಲಲ್ಲೇ ಹುಟ್ಟಿಕೊಂಡಿವೆ. ಜೀವ ಭಯದಿಂದ ಮುಸ್ಲಿಂರು, ಮುಸ್ಲಿಂರೇ ಹೆಚ್ಚಾಗಿರುವ ಪ್ರದೇಶಗಳ ಕಡೆ ನುಗ್ಗುತ್ತಿದ್ದಾರೆ. 'ಹೆಚ್ಚಾದ ಸಂಖ್ಯೆಯಲ್ಲಿ ರಕ್ಷಣೆ ಇದೆ', ಎನ್ನುವ ವಿಚಾರ ಬಹುಶಃ ಇಷ್ಟು ತೀವ್ರವಾಗಿ ಅನುಭವಕ್ಕೆ ಬೇರೆ ಯಾವುದೇ ಸಂದರ್ಭದಲ್ಲಿ ಬಂದಿರಲಿಕ್ಕಿಲ್ಲ. ಪ್ರತಿಯೊಂದು ಸಂದರ್ಭದಲ್ಲೂ ಸ್ಥಳೀಯ ಮುಸ್ಲಿಂ ನಾಯಕ ವಸತಿ, ಆಹಾರ ವ್ಯವಸ್ಥೆ ಮಾಡಿದ್ದಿದೆ. ಕೆಲವು ಕಡೆ ಸರ್ಕಾರದಿಂದ ಆಹಾರ ಸಾಮಾಗ್ರಿ ಒದಗಿಸಲಾಗಿದೆ. ಆದರೆ ಜನರಿಂದ ಆಯ್ಕೆಯಾದ ಸರ್ಕಾರಿ ಪ್ರತಿನಿಧಿಗಳು ಈ ಆಶ್ರಯ ತಾಣಗಳಿಗೆ ಭೇಟಿ ಇತ್ತಿಲ್ಲ. ಇದರ ಹಿಂದಿನ ಸೂಚನೆ ಸ್ಪಷ್ಟವಾಗಿದೆ. ಮುಸ್ಲಿಂರ ಜವಾಬ್ದಾರಿ ರಾಜ್ಯ ಸರ್ಕಾರದ್ದಲ್ಲ ಮುಸ್ಲಿಂರು ಇತರೇ ಮುಸ್ಲಿಂರನ್ನು ನೋಡಿಕೊಳ್ಳಬೇಕು.

ವಡುಲಿ ಆಶ್ರಯ ತಾಣವನ್ನು ಮುಸ್ಲಿಂ ಮಿಂಚ್ ಜಮ್ಮಾತ್ ನೋಡಿಕೊಳ್ಳತೊಡಗಿದೆ. ಸ್ಥಳೀಯ ಮುಸ್ಲಿಂ ನಾಯಕರು ಫೋನ್ ಮಾಡುವುದು. ಪೋಲೀಸ್ ಸ್ಪೇರ್ಷ ರಕ್ಷಣೆಗಾಗಿ ಬೇಡುವುದು, ಮುಸ್ಲಿಂರು ಹೆಚ್ಚಿರುವ ಕಡೆ ಆಶ್ರಯ ತಾಣಗಳನ್ನು ಮಾಡುವ ಕೆಲಸ ಮಾಡುತ್ತಿದ್ದಾರೆ.

ಸಂಬಂಧಗಳ ಹೆಣಿಕೆಯೇ ಹಳ್ಳಿಗಾಡಿನ ಆಶ್ರಯತಾಣಗಳ ಮೂಲಧಾರಗಳಾಗಿವೆ. ಸಬ್ರಕಾಂತ ಜಿಲ್ಲೆಯ ರಾಮಾಯಣ ಆಶ್ರಯತಾಣ ಇದಕ್ಕೆ ಉದಾಹರಣೆಯಾಗಿದೆ. ರಾಮಾಯಣ (ಇದರ ಜೊತೆಯ ಇನ್ನೊಂದು ಹಳ್ಳಿಯ ಹೆಸರು ಮಹಾಭಾರತ) ಮುಸ್ಲಿಂ ಸಂಖ್ಯೆ ಹೆಚ್ಚಾಗಿ ಹೊಂದಿರುವ ಗ್ರಾಮ ಪಂಚಾಯಿತಿ. ಇಲ್ಲಿ ಮುಸ್ಲಿಂ ಸರಪಂಚನಿದ್ದಾನೆ. ಆತನ ಹೆಸರು ಸತ್ತರ್ ಬಾಯಿ ಜಮಾತ್ ಬಾಯಿ. ಇಲ್ಲಿ ಆಶ್ರಯತಾಣದಲ್ಲಿ 500 ಮಂದಿ ನಿರಾಶ್ರಿತರಿದ್ದಾರೆ. 50 ಕಿ.ಮಿ ದೂರದ ಅಕ್ಕ-ಪಕ್ಕದ ಹಳ್ಳಿಗಳಿಂದ ಇಲ್ಲಿಗೆ ಬಂದಿರುವ ಸಂಬಂಧಿಕರು. ಇದು ವಡಾಲಿಯ ತರಹದ ಆಶ್ರಯತಾಣವಲ್ಲ. ಇಲ್ಲಿ ನಿರಾಶ್ರಿತರು ತಮ್ಮ ದೂರದ ಸಂಬಂಧಿಗಳ ಮನೆಯಲ್ಲಿಯೇ ಆಶ್ರಯ ಪಡೆದಿದ್ದಾರೆ. ಊಟಕ್ಕೆ ಮಾತ್ರ ದೊಡ್ಡ ಕೊಠಡಿಯೊಂದರಲ್ಲಿ ಸೇರುತ್ತಾರೆ. ಒಂದೇ ಅಡಿಗೆ ಮನೆಯಿಂದ ಎಲ್ಲರಿಗೂ ಆಹಾರ ಸರಬರಾಜು ಮಾಡಲಾಗುತ್ತದೆ. 10-12 ವರ್ಷಗಳ ಹಿಂದಿನ ತನಕ ಈ ಹಳ್ಳಿಯನ್ನು ಪ್ರತಾಪಗಡ್ ಎಂದು ಕರೆಯಲಾಗುತ್ತಿತ್ತು. ಅನಂತರ ಟಿ.ವಿ. ಧಾರವಾಹಿಗಳಾದ ರಾಮಾಯಣ, ಮಹಾಭಾರತ ವೀಕ್ಷಿಸಿದ ಅವರು ಹಿಂದೂ ಪುರಾಣಕತೆಗಳನ್ನು ಇಷ್ಟಪಟ್ಟು ತಮ್ಮ ಹಳ್ಳಿಗೆ ರಾಮಾಯಣ, ಮಹಾಭಾರತ ಎಂದು ಹೆಸರಿಟ್ಟರು. ಆದರೆ ಇನ್ನು ಮುಂದೆಯೂ ಅವರು ಈ ರೀತಿ ಮಾಡಿಯಾರೆ ಎಂಬುದು ಪ್ರಶ್ನೆಯಾಗಿ ಉಳಿಯುತ್ತದೆ.

ಈಗ ಗುಜರಾತಿನಲ್ಲಿ 100,000 ನಿರಾಶ್ರಿತರು ಇದ್ದಾರೆ. ಅವರಲ್ಲಿ ಬಹುಪಾಲು ಮಹಿಳೆಯರು ಹಾಗೂ ಮಕ್ಕಳು. ಸತ್ಯ ಶೋಧನೆ ವರದಿಯ ಲೇಖಕಿಯರು 7 ಆಶ್ರಯ ತಾಣಗಳಿಗೆ ಭೇಟಿ ಇತ್ತಿದ್ದಾರೆ.

| ಆಶ್ರಯತಾಣ | ಹೆಂಗಸರು | ಪುರುಷರು | ಮಕ್ಕಳು | ಒಟ್ಟು |
|---|---|---|---|---|
| ಶಾ ಇ ಆಲಮ್ (ನಗರ) | 2744 | 3008 | 4755 | 10,537 |
| ಕುತಬ್ ಆಲಮ್ (ನಗರ) | 378 | 355 | 495 | 1228 |
| ರಾಮಾಯಣ (ಹಳ್ಳಿ) | 128 | 142 | 153 | 423 |
| ಮೆಮ್‌ದಾಬಾದ್ (ಹಳ್ಳಿ) | ಸುಮಾರು 500 | ಸುಮಾರು 500 | ಸುಮಾರು 500 | ಸುಮಾರು 1500 |
| ವಡಾಲಿ (ಹಳ್ಳಿ) | 620 | 560 | 597 | 1777 |
| ಹಲೋಲ್ | 449 | 444 | 177 | 1070 |
| ಕಲೋಲ್ | 674 | 667 | 910 | 2500 |

## ಲೈಂಗಿಕ ಹಿಂಸಾಚಾರ ಮತ್ತು ಮಹಿಳೆಯರು :

ಗುಜರಾತಿನಲ್ಲಿ ನಡೆದ ದಳ್ಳುರಿಯಲ್ಲಿ ಮಹಿಳೆಯರು ಕೇಂದ್ರ ಬಿಂದುಗಳು ಹಾಗೂ ಅವರ ದೇಹಗಳು ರಣರಂಗಭೂಮಿಗಳು. ಗುಜರಾತಿನ ಸ್ಥಳೀಯ ಭಾಷಾ ಪತ್ರಿಕೆಯೊಂದು ಈ ಅಂಶವನ್ನು ಪ್ರೇರೇಪಿಸುವಲ್ಲಿ ಮುಖ್ಯ ಪಾತ್ರವಹಿಸಿದೆ. ಕತೆ ಪ್ರಾರಂಭವಾದದ್ದು ಗೋದ್ರಾದಿಂದ. 58 ಜನ ಹಿಂದೂಳು ದಹನಗೊಂಡಿದ್ದರು. ಅದರಲ್ಲಿ 26 ಜನ ಹೆಂಗಸರು ಹಾಗೂ 14 ಜನ ಮಕ್ಕಳು. ಹಿಂದೂ ಸೇಡಿನ ಭಾವನೆಗಳನ್ನು ಹೊಡೆದೆಬ್ಬಿಸಲು ಸಾವು ಮಾತ್ರ ಸಾಲದಾಗಿತ್ತು. ಹಾಗಾಗಿ ಸಾವಿಗಿಂತ ಘೋರವಾದದ್ದೆಂದರೆ ಹಿಂದೂ ಹೆಂಗಸರ ಅತ್ಯಾಚಾರದ ವಿಚಾರ. ಹೆಂಗಸರ ದೇಹದ ಮೇಲೆ ಸಮುದಾಯದ ಗೌರವ, ಪ್ರತಿಷ್ಟೆಗಳಿದ್ದವು. ಹಾಗಾಗಿ ಫೆಬ್ರವರಿ 28ರಂದು ಸಂದೇಶ - ಗುಜರಾತಿನ ಮುಖ್ಯ ಪತ್ರಿಕೆ - ಗೋದ್ರಾದ ದುಃಖಾಂತ ಕಥೆಯನ್ನು ಹೇಳುವ ಜೊತೆಗೆ 1 ಪುಟದ ಕತೆಯನ್ನು ಪ್ರಕಟಿಸಿತ್ತು. "10-15 ಮಂದಿ ಹಿಂದೂ ಮಹಿಳೆಯರನ್ನು ರೈಲ್ವೇ ಭೋಗಿಯಿಂದ ಹೊರಕ್ಕೆ ಎಳೆಯಲಾಯಿತು". ಅದೇ ಕಡೆ ಪುಟ 16ರಲ್ಲಿ "10-15 ಹಿಂದೂ ಹೆಂಗಸರನ್ನು ಕೊಳಚೆ ಪ್ರದೇಶಗಳಿಗೆ ಎಳೆದೊಯ್ಯಲಾಯಿತು" ಎಂಬ ಶಿರೋನಾಮೆಯಲ್ಲಿ ಪ್ರಕಟವಾಯಿತು. ಈ ಕತೆ ಪೂರ್ಣವಾಗಿ ಕಟ್ಟು ಕಥೆಯಾಗಿದೆ. ಪೋಲೀಸರೇ ಈ ವರದಿಯನ್ನು ನಿರಾಕರಿಸುತ್ತಾರೆ. ಟೈಮ್ಸ್ ಸೇರಿದಂತೆ ಇತರೇ ಪತ್ರಿಕೆಗಳೂ ಇದು ಸತ್ಯಕ್ಕೆ ದೂರವೆಂದು ಗಮನಿಸಿದವು. ಒಂದು ದಿನದ ನಂತರ ಅಂದರೆ ಮಾರ್ಚ್ 1, 2002 ರಂದು ಸಂದೇಶ ಕಟ್ಟು ಕತೆಯ ಮುಂದಿನ ಭಾಗವನ್ನು ಪ್ರಕಟಿಸಿತು. ಸಬರಮತಿ ಎಕ್ಸ್‌ಪ್ರೆಸ್‌ನಲ್ಲಿ ಅಪಹರಿಸಲಾದ ಯುವತಿಯರಲ್ಲಿ ಇಬ್ಬರು ಯುವತಿಯರ ಶವಗಳು ದೊರತಿವೆ, ಹೆಂಗಸರ ಮೊಲೆಗಳನ್ನು ಕತ್ತರಿಸಿ ಹಾಕಲಾಗಿದೆ. ಹಿಂದೂ ಗೌರವ ಘನತೆಗೆ ಈಗ ಧಾರುಣ ಲೈಂಗಿಕ ಹಿಂಸೆ ಹಾಗೂ ಕ್ರೂರತೆ ಕೂಡಾ ಸೇರಿತ್ತು. ಅಪಹರಿಸುವಿಕೆ ಹಾಗೂ ಮೊಲೆ ಕತ್ತರಿಸುವಿಕೆ ಇವೆರೆಡು ಹುರುಳಿಲ್ಲದ ಕಟ್ಟು ಕತೆಗಳಾಗಿದ್ದವು. ಪೋಲೀಸರು ಈ ವರದಿಯನ್ನು ನಿರಾಕರಿಸಿದ್ದರು. ನಂತರದಲ್ಲಿ ಸಂದೇಶ ಪತ್ರಿಕೆಯ ಮೂಲೆಯೊಂದರಲ್ಲಿ ಈ ಬಗ್ಗೆ ಪಾಶ್ಚಾತ್ತಾಪ ಸೂಚಿಸಿತೆಂದು ವರದಿಯ ಲೇಖಕಿಯರಿಗೆ ಹೇಳಲಾಯಿತು. ಆದರೆ ಅಷ್ಟರಲ್ಲಿ ರಿಪೇರಿ ಮಾಡಲಾಗದಷ್ಟು ಅಪಾಯವನ್ನು ಪತ್ರಿಕೆ ಮಾಡಿತ್ತು. ಹಿಂದೂ ಹೆಂಗುಸರ ಕೊಲೆ ಹಾಗೂ ಅವರ ಮೇಲೆ ಆತ್ಯಾಚಾರ ನಡೆದ ಸುದ್ದಿ - ಭಾವನೆಗಳ ಕಿಚ್ಚೆಬ್ಬಿಸಿ ಮುಸ್ಲಿಂ ಹೆಂಗಸರ ಹಾಗೂ ಮಕ್ಕಳ ಮೇಲೆ ದೌರ್ಜನ್ಯಕ್ಕೆ ಹಾಗೂ ಲೈಂಗಿಕ ಹಿಂಸೆಗೆ ಕಾರಣೀಭೂತವಾಯಿತು. ಇಂತಹ ಭೀಕರ ಲೈಂಗಿಕ ಹಿಂಸೆ ಈ ಮೊದಲಿನ ಕೋಮು ಸಂಘರ್ಷದಲ್ಲಿ ಯಾವಾಗಲೂ ಕಂಡಿದ್ದಿಲ್ಲ. ಕೋಪೋದ್ರಿಕ್ತ ಹಿಂದೂಗಳು, "ಅವರು ನಮ್ಮ ಹೆಂಗಸರು, ನಮ್ಮ ಮಕ್ಕಳ ಮೇಲೆ ಆಕ್ರಮಣ ನಡೆಸಿದ್ದಾರೆ, ನಾವು ಸೇಡು ತೀರಿಸಿಕೊಳ್ಳಬೇಕು" ಎಂಬ ಕಿಚ್ಚನ್ನು ಹೊತ್ತಿಸಿಕೊಂಡು ಉರಿಯತೊಡಗಿದರು. ಸಂದೇಶ ಪತ್ರಿಕೆ ಯುದ್ಧದ ಶಸ್ತ್ರಾಸ್ತ್ರವಾಯಿತು. ಕೆಲವು ಕಣ್ಣಾರೆ ಕಂಡ ಸಾಕ್ಷಿಗಳ ಪ್ರಕಾರ ನರೋದ್ ಪಾಟಿಯಾದಲ್ಲಿ ಮುಸ್ಲಿಂರ ಅಂಗಡಿ, ಮಸೀದಿ ನಾಶ ಮಾಡಿದ, ಮುಸ್ಲಿಂ ಹೆಂಗಸರ ಮಕ್ಕಳ ಮೇಲೆ ದೌರ್ಜನ್ಯ ನಡೆಸಿದ ಜನರ ದಂಡು ಅವರ ಕೈಯಲ್ಲಿ ಬರಿಯ ಕಲ್ಲು, ಕತ್ತಿಗಳನ್ನು ಮಾತ್ರ ಹಿಡಿದಿರಲಿಲ್ಲ, ಅವರು ಸಂದೇಶ ಪತ್ರಿಕೆಯ ಪ್ರತಿಗಳನ್ನು ಹಿಡಿದು "ರಕ್ತಕ್ಕೆ ರಕ್ತ" ಎಂಬ ಘೋಷಣೆಗಳನ್ನು ಕೂಗುತ್ತಿದ್ದರು. ಈ ಕಟ್ಟು ಕತೆ ಹೀಗೇ ಪ್ರಚಾರವಾಗಿ ಹಳ್ಳಿಗಳಲ್ಲಿ 'ಹಿಂದೂ ಹೆಂಗಸಿನ' ಪದಕ್ಕೆ ಬದಲಾಗಿ 'ಆದಿವಾಸಿ' ಎಂಬುದಾಗಿ ಪ್ರಚುರತೆ ಪಡೆಯಿತು. ಹಾಗಾಗಿ ಮುಸ್ಲಿಂರನ್ನು ಆಕ್ರಮಣ ಮಾಡುವುದಕ್ಕೆ ಆದಿವಾಸಿಗಳನ್ನು ಬಳಸಿಕೊಳ್ಳುವುದರಲ್ಲಿಯೂ ಆಕ್ರಮಣಕಾರರು ಯಶಸ್ವಿಯಾದರು. ಹೀಗೆ ಸಂದೇಶ ಪತ್ರಿಕೆ ಲೈಂಗಿಕ ಹಿಂಸೆಯ ಕತೆ ಬಳಸಿ-ಅವರ ದೇಹಗಳನ್ನು ಯುದ್ಧಾಸ್ತ್ರಗಳನ್ನಾಗಿಸಿ ಜನರ ಹುಚ್ಚು ಭಾವೋದ್ವೇಗಗಳಿಗೆ ಕಿಚ್ಚು ಹಚ್ಚುವಲ್ಲಿ ಯಶಸ್ವಿಯಾಯಿತು.

ವ್ಯಂಗ್ಯವೆಂದರೆ ಹಿಂದೂ ಹೆಂಗಸರ ಮೇಲೆ ನಡೆದ ಅತ್ಯಾಚಾರದ ಕಟ್ಟುಕತೆಗಳು ಪ್ರಚಾರ ಪಡೆಯುವಲ್ಲಿ ಯಶಸ್ವಿಯಾದರೆ - ಮುಸ್ಲಿಂ ಮಹಿಳೆಯರ ಮೇಲೆ ನಡೆದ ವಾಸ್ತವ ಲೈಂಗಿಕ ದೌರ್ಜನ್ಯದ ಕುರಿತು ಇಂಗ್ಲೀಷ್ ಪತ್ರಿಕೆಗಳೂ ಸೇರಿದಂತೆ ಎಲ್ಲಾ ಪತ್ರಿಕೆಗಳೂ ಸಂಪೂರ್ಣ ಮೌನತಳೆದವು. ಗುಜರಾತಿನ ಯಾವ ಪತ್ರಿಕೆಗಳೂ ಮುಸ್ಲಿಂ ಹೆಂಗಸರ ಮೇಲೆ ನಡೆದ, ನಡೆಯುತ್ತಿರುವ ದೌರ್ಜನ್ಯಗಳನ್ನು ಪ್ರಕಟಿಸುತ್ತಿಲ್ಲ. ಮುಸ್ಲಿಂರ ಪರವಾಗಿರುವ ಕಾಳಜಿ ಹೊಂದಿರುವ 'ಗುಜರಾತ್ ಟು-ಡೆ' ಪತ್ರಿಕೆ ಕೂಡಾ ಅತ್ಯಾಚಾರದ ಬಗ್ಗೆ ಒಂದು ಸಣ್ಣ ವರದಿ ಪ್ರಕಟಿಸಿದೆ. ಟೈಮ್ಸ್ ಆಫ್ ಇಂಡಿಯ ಏಪ್ರಿಲ್-1, 2002 ರಂದು ಒಂದು ಅತ್ಯಾಚಾರದ ಘಟನೆಯನ್ನು ಪ್ರಕಟಿಸಿದೆ. ಅಹಮದಾಬಾದಿನ ಹಿರಿಯ ಪತ್ರಕರ್ತರ ಪ್ರಕಾರ ಅತ್ಯಾಚಾರದ ಕತೆಗಳು ಜನರನ್ನು ಪ್ರೇರೇಪಿಸುತ್ತವೆ. ತಾವು ಜವಾಬ್ದಾರಿಯುತ ಪಾತ್ರ ಹೊಂದಿರುವುದರಿಂದ ಹೆಚ್ಚು ಹಿಂಸಾಚಾರ ಆಗದಿರಲಿ ಎಂದು ಹಿಂಸಾಚಾರದ ಕತೆಗಳನ್ನು

ಪ್ರಕಟಿಸುತ್ತಿಲ್ಲ ಎಂದರು. ಗೋದ್ರಾ ಘಟನೆಯ ನಂತರ ಪತ್ರಿಕೆಗಳು ಸ್ವಯಂ-ಸೆನ್ಸಾರ್ ನಿಯಮಗಳನ್ನು ಅತ್ಯಾಚಾರದ ಕಥೆಗಳ ಬಗ್ಗೆ ಅನುಸರಿಸುತ್ತಿವೆ.

ಮುಸ್ಲಿಂ ಹೆಂಗಸರು ಕಲ್ಪನೆಗೆ ಅಸಾಧ್ಯವಾದ ಲೈಂಗಿಕ ಶೋಷಣೆಗೆ ಗುಜರಾತಿನ ಕೋಮು ದಳ್ಳುರಿಯಲ್ಲಿ ಬಲಿಯಾಗಿದ್ದಾರೆ. ಜೊತೆಗೆ ಅವರ ಕತೆಗಳನ್ನು ಇಡಿಯ ಪ್ರಪಂಚಕ್ಕೆ ಹೇಳಲು ಯಾರೂ ಸಿದ್ಧರಿಲ್ಲ. ಹೆಂಗಸರ ದೇಹಗಳನ್ನು ಯುದ್ಧದ ಅಸ್ತ್ರಗಳನ್ನಾಗಿ ಬಳಸಿ ಪುರುಷರ ಗೌರವಕ್ಕೆ, ಘನತೆಗೆ ಧಕ್ಕೆ ತರಲು ಪ್ರಯತ್ನಿಸಲಾಗುತ್ತಿದೆ. ಸಾಂಕೇತಿಕ ಅರ್ಥದಲ್ಲಿ ಹೆಂಗಸರ ಮೇಲಿನ ಅತ್ಯಾಚಾರ ಬಳಕೆಯಾಗುತ್ತಿದೆ. ಆದಾಗ್ಯೂ ಇದೆಲ್ಲವನ್ನೂ ಮೌನವಾಗಿ ಸಹಿಸುವಂತೆ ಹೆಂಗಸರಿಗೆ ಹೇಳಲಾಗುತ್ತಿದೆ. ಹೆಂಗಸರಿಗೆ ಈ ರೀತಿಯ ಕೋಮು ಹಿಂಸೆ ಬೇಕಾಗಿಲ್ಲ. 'ಶಾಂತಿ' ಯನ್ನು ಸತ್ಯದ ಮೇಲೆ ಗೋರಿ ಕಟ್ಟುವುದರಿಂದ ಕೊಂಡುಕೊಳ್ಳುವುದಕ್ಕೆ ಸಾಧ್ಯವಾಗುವುದಿಲ್ಲ. ಅಥವಾ 'ಶಾಂತಿಯನ್ನು' ಗುಜರಾತಿನಲ್ಲಿ ತಮಗೇನಾಗಿದೆ ಎಂದು ಹೇಳುವ ಹಕ್ಕನ್ನು ಹೆಂಗಸರಿಂದ ಕಸಿದುಕೊಳ್ಳುವ ಮೂಲಕ ಕೊಂಡುಕೊಳ್ಳಲಾಗುವುದಿಲ್ಲ.

ಹಿಂಸೆಗೊಳಗಾದ ಮಹಿಳೆಯರು ರಾಜ್ಯ ಸರ್ಕಾರದ ಬಗ್ಗೆ ಹೀಗೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತಾರೆ. 'ನರೇಂದ್ರ ಮೋದಿ, ಆತನೇ ಇದೆಲ್ಲ ಮಾಡಿದ್ದು', 'ಆತನೇ ನಮ್ಮ ಬದುಕುಗಳನ್ನು ನಾಶಗೊಳಿಸಿದ್ದು' ಸರ್ಕಾರ? ಯಾವ ಸರ್ಕಾರ? ಅವರಿಗೆ ಅಗತ್ಯವಾಗಿರುವ ಸಂದರ್ಭದಲ್ಲಿ ಸರ್ಕಾರ ಕಣ್ಮರೆಯಾಗಿದೆ. ಸರ್ಕಾರದ ಎಲ್ಲ ಅಂಗ-ಉಪ ಅಂಗಗಳೂ, ಪೋಲೀಸ್ ಸೇರಿದಂತೆ ಮುಸ್ಲಿಂ ಮಹಿಳೆಯರಿಗೆ ರಕ್ಷಣೆ ನೀಡುವ ತಮ್ಮ ಜವಾಬ್ದಾರಿಯಿಂದ ತಪ್ಪಿಸಿಕೊಂಡಿವೆ. ನಿಜವೆಂದರೆ ಹಿಂಸೆಯ ಹೆಚ್ಚಳದಲ್ಲಿ ಸರ್ಕಾರದ ಪಾತ್ರವೇ ಗಣನೀಯವಾಗಿದೆ. ಗೋದ್ರ ಘಟನೆಯ ನಂತರ ದೌರ್ಜನ್ಯ ನಡೆಸಿದವರನ್ನು ಶಿಕ್ಷಿಸುವಲ್ಲಿ ಸರ್ಕಾರ ಸಂಪೂರ್ಣವಾಗಿ ಸೋತಿದೆ. ಎಫ್.ಐ.ಆರ್‌ಗಳು ದಾಖಲಾಗಿಲ್ಲ, ಪರಿಹಾರ ನೀಡಲಾಗಿಲ್ಲ, ಆಶ್ರಯ ತಾಣಗಳು ಮುಸ್ಲಿಂರ ಪ್ರಯತ್ನಗಳಿಂದ ಮಾತ್ರ ನಡೆಯುತ್ತಿವೆ. ಇದಕ್ಕಾಗಿ ಸರ್ಕಾರ ನೀಡಿರುವ ಸಹಾಯ ಅಲ್ಪ ಪ್ರಮಾಣದ್ದು. ನರೇಂದ್ರ ಮೋದಿ ಏಪ್ರಿಲ್ 4, 2002 ರಂದು 'ಶಾ ಈ ಆಲಮ್' ಆಶ್ರಯ ತಾಣಗಳನ್ನು ಪ್ರದಾನ ಮಂತ್ರಿಗಳೊಡನೆ ಆಗಮಿಸಿ, ಮೊದಲ ಬಾರಿಗೆ ಭೇಟಿ ನೀಡಿದ್ದರು!

ಗುಜರಾತಿನಲ್ಲಿ ನಡೆದ ಹಿಂಸೆಯಿಂದಾಗಿ ಅತ್ಯಂತ ಹೀನಾಯ ಸ್ಥಿತಿಯಲ್ಲಿ ಜನ ಇಲ್ಲಿ ಬದುಕುತ್ತಿದ್ದಾರೆ. ಶೋಚನೀಯ ಸ್ಥಿತಿಯ ಆಶ್ರಯ ತಾಣಗಳಲ್ಲಿ ಹಿಂಸೆಗೊಳಗಾಗಿ, ನೊಂದು ಬದುಕಿದ ಜನ ಹೇಗೋ ಜೀವನ ಸಾಗಿಸುತ್ತಿದ್ದಾರೆ. ಮನಸ್ಸು ಹಾಗೂ ದೇಹಗಳಿಂದ ನಿಜವಾಗಿಯೂ ಇವರು ಹೊರದೂಡಲ್ಪಟ್ಟವರೇ ಆಗಿದ್ದಾರೆ. ಅಕ್ಕ-ಪಕ್ಕದವರಿಂದ, ಸ್ನೇಹಿತರಿಂದ ಮೋಸ ಹೋಗಲ್ಪಟ್ಟ ಇವರು, ಸತ್ತರೇ ಸಾಯಲಿ, ಅವರದೇ ಜವಾಬ್ದಾರಿ ಎನ್ನುವಂತಹ ಸರ್ಕಾರದ ನಿರ್ಲಕ್ಷ್ಯಕ್ಕೆ ಒಳಗಾದ ಇವರು ತಮ್ಮ ತಮ್ಮವರನ್ನೇ ನೆಚ್ಚಿಕೊಳ್ಳುವಂತಾಗಿದೆ. ತಮ್ಮ ಕುಟುಂಬದ ಗಳಿಕೆಯ ಸದಸ್ಯರನ್ನು ಕಳೆದುಕೊಂಡ ಹೆಂಗಸರು ಇದ್ದಕ್ಕಿದ್ದಂತೆ ಆರ್ಥಿಕ ಮುಗ್ಗಟ್ಟನ್ನು ಎದುರಿಸುತ್ತಾ ಭರಿಸಲಾದ ಹೊಡೆತ ತಿಂದಿದ್ದಾರೆ. ತಮ್ಮ ಮಕ್ಕಳ ಭವಿಷ್ಯದ ಬಗ್ಗೆ ನಿರಾಸೆಯ ಕಣ್ಣುಗಳಿಂದ, ಮಬ್ಬು ಕವಿದ ಕಣ್ಣುಗಳಿಂದ ನೋಡಬೇಕಾಗಿದೆ. ಒಂಟಿಯಾಗಿರುವ ಹೆಂಗಸರು, ವಿಧವೆಯರು ಆರ್ಥಿಕ ಸ್ವಾತಂತ್ರ್ಯವಿದ್ದಾಗ್ಯೂ ಕೂಡಾ ತಮ್ಮ ಉಳಿವಿಗಾಗಿ ತಮ್ಮ ಸಮುದಾಯದ ಪಿತೃ ಪ್ರಧಾನ್ಯತೆಯ ರಚನೆಗಳನ್ನೇ ಅವಲಂಬಿಸಬೇಕಿದೆ. ಬದುಕಿಗಾಗಿ ಉಳಿಸಿದ್ದೆಲ್ಲವೂ ಸುಟ್ಟು ಬೂದಿಯಾಗಿದೆ. ಇಂತಹ ಸಂದರ್ಭದಲ್ಲಿ ವಿಶ್ವ ಹಿಂದೂ ಪರಿಷತ್ ಹಾಗೂ ಭಜರಂಗದಳದ ಕಾರ್ಯಕರ್ತರು ಗುಜರಾತಿನ ಎಲ್ಲ ಕಡೆ ಶಿಕ್ಷೆಯ ಭಯವಿಲ್ಲದೇ ಓಡಾಡತೊಡಗಿದ್ದಾರೆ. ಮಹಿಳಾ ಕಾರ್ಯಕರ್ತೆಯರು ಅತ್ಯಾಚಾರಕ್ಕೊಳಗಾಗಿ ಬದುಕುಳಿದವರೊಂದಿಗೆ, ವಿಧವೆಯರೊಂದಿಗೆ ಮಾತನಾಡುತ್ತಾ, ಮನಸ್ಸಿಗೆ ಮುಸುಕಿದ ಮಬ್ಬು-ಕತ್ತಲನ್ನು ಕಳೆಯುತ್ತಾ, ಎಫ್.ಐ.ಆರ್. ದಾಖಲಿಸುತ್ತಾ ಕೆಲಸ ಮಾಡುತ್ತಿದ್ದಾರೆ. ಇಂತಹ ಕಾರ್ಯಕರ್ತೆಯರ ಬದುಕಿಗೂ ನಿರಂತರವಾದ ಭಯಗಳು ಇದ್ದೇ ಇವೆ. ಜವಾಬ್ದಾರಿ ರಹಿತ ಸರ್ಕಾರ ಶಾಂತಿ ಕಮಿಟಿಗಳನ್ನು ಸ್ಥಾಪಿಸುವುದಾಗಿ ಮಾತನಾಡತೊಡಗಿದೆ. ಈ ಮೂಲಕ ನಂಬಿಕೆ ಮತ್ತು ವಿಶ್ವಾಸಗಳನ್ನು ಮುಸ್ಲಿಂರಲ್ಲಿ ಬೆಳಸುವುದಾಗಿದೆ. ಪಂಚಮಹಲ್ ಜಿಲ್ಲಾಧಿಕಾರಿ ಜಯಂತಿ ರವಿಯ ಪ್ರಕಾರ ಸರ್ಕಾರವು ಜನರಿಗೆ ತಮ್ಮ ಮನೆಗಳಿಗೆ ಮರಳಲು ಪ್ರೇರೇಪಣೆ ನೀಡುವುದು ಶಾಂತಿ ಕಮಿಟಿಗಳ ಉದ್ದೇಶವಾಗಿದೆ. ಆದರೆ ಬಹಳ ಜನ ಮಹಿಳೆಯರು ಊರುಗಳಿಗೆ, ಮನೆಗಳಿಗೆ ಹಿಂತಿರುಗಲು ಸಾಧ್ಯವೇ ಇಲ್ಲ ಎನ್ನುತ್ತಿದ್ದಾರೆ. ಬದುಕುವುದಕ್ಕಾಗಿ ಸಾಂಸ್ಕೃತಿಕ ಒತ್ತಡಗಳನ್ನು ಹೇರಿಕೊಳ್ಳಬೇಕಾಗಿ ಬಂದಿರುವ ಮಾನಸಿಕ ಭಯದಲ್ಲೂ ಮುಸ್ಲಿಂ ಮಹಿಳೆಯರು ನರಳುತ್ತಿದ್ದಾರೆ. ಹಳ್ಳಿಗಾಡು

ಹೆಂಗಸರು 'ಹಿಂದೂ ಡ್ರೆಸ್' ಕೋಡನ್ನು ತಮ್ಮ ಮೇಲೆ ಹೇರಿಕೊಂಡಿರುವುದನ್ನು ವರದಿಯ ಲೇಖಕಿಯರ ಹತ್ತಿರ ಹೇಳಿಕೊಂಡಿದ್ದಾರೆ. ಸೆಲ್ವರ್ ಕಮೀಜ್ ಬಿಟ್ಟು ಸೀರೆ ಉಡುವುದು; ಬಿಂದಿಯನ್ನು ಹಣೆಗೆ ಇಡುವುದು ಇವು ರಕ್ಷಣೆ ಪಡೆಯುವ ಯತ್ನಗಳಾಗಿವೆ. ಬಿಂದಿ ಇಟ್ಟುಕೊಳ್ಳುವುದು, ಇಟ್ಟುಕೊಳ್ಳದಿರುವಂತಹ ಸಣ್ಣ ಸಂಗತಿ ಕೂಡಾ 200 ಮಸೀದಿ, ದರ್ಗಾಗಳು ಗುಜರಾತಿನಲ್ಲಿ ಸುಟ್ಟು ಭಸ್ಮವಾದ ಹಿನ್ನಲೆಯಲ್ಲಿ ಅತ್ಯಂತ ದೊಡ್ಡ ಸಂಗತಿಯಾಗುತ್ತದೆ.

ರಿಜ್ವಾನ್ - ವಾಚ್ವಾ - ಮಾರ್ಚ್ 27, 2002

ಲಾಯರ್ ಆಗಿ ಸ್ವತಂತ್ರವಾಗಿ ಬದುಕುವ, ಬದುಕುವ ಛಾತಿಯುಳ್ಳ 26 ವರ್ಷದ ರಿಜ್ವಾನ ನಂತವರ ಬದುಕು ಇಂದು ಗುಜರಾತಿನಲ್ಲಿ ಅತಂತ್ರವಾಗಿದೆ. ಈಕೆ ವಾಚ್ವಾದಲ್ಲಿ ತನ್ನ ತಂದೆ ತಾಯಿಯರೊಂದಿಗೆ ಬದುಕುತ್ತಿದ್ದಾಳೆ. ಕೋರ್ಟಿಗೆ ಹೋಗುವ ಸಂದರ್ಭದಲ್ಲಿ ಈಕೆ ಹಲವಾರು ರೀತಿಯ ಶತ್ರುತ್ವ, ದ್ವೇಷವನ್ನು ಎದುರಿಸಿದ್ದಾಳೆ. ಆಕೆ ಇರುವ ಕೋರ್ಟಿನಲ್ಲಿ 8% ಮುಸ್ಲಿಂರಿದ್ದಾರೆ. ಸಭೆಯೊಂದರಲ್ಲಿ ಅಲ್ಲಿ ಹಾಜರಿದ್ದವರೆಲ್ಲಾ ಮುಸ್ಲಿಂರೇ. ಅತ್ಯಂತ ಹಿರಿಯ ಲಾಯರ್ ಒಬ್ಬರು ಸಭೆಗೆ ಆಗಮಿಸಿದಾಗ ಅವರ ಪ್ರತಿಕ್ರಿಯೆ ಹೀಗಿತ್ತು ''ಈ ಸಭೆ ಪಾಕಿಸ್ತಾನದ ಕೋರ್ಟ್ ತರಹ ಅನ್ನಿಸುತ್ತದೆ''. ರಿಜ್ವಾನ್‌ಳ ಮನಸ್ಸಿನಲ್ಲಿ ''ನಾವು ಭಾರತೀಯರು, ಹೀಗೆಲ್ಲ ನಮಗೆ ಹೇಳಬೇಡಿ'' ಎಂದು ಅಂದುಕೊಂಡರು. ಹೀಗೆಯೇ ಇಂಡೋ-ಪಾಕ್ ಕ್ರಿಕೆಟ್ ಮ್ಯಾಚುಗಳು ಆತಂಕ ಉಂಟು ಮಾಡುವುದನ್ನು ಈಕೆ ಜ್ಞಾಪಿಸಿಕೊಳ್ಳುತ್ತಾಳೆ. ಫೆಬ್ರವರಿ 27, 2002 ರಿಂದ ಆಕೆ ಪ್ರಾಕ್ಟೀಸ್ ಮಾಡುತ್ತಿರುವ ಕೋರ್ಟಿಗೆ ಹೋಗಿಲ್ಲ. 'ನಾನು ಸ್ಕೂಟರ್ ಮೇಲೆ ಸಾಮಾನ್ಯವಾಗಿ ಹೋಗುತ್ತೇನೆ, ನಾನು ಹೋಗಬಹುದು. ಆದರೆ ನಾನು ಮರಳಿ ಬರದಿದ್ದರೆ ಏನು ಅರ್ಥವಿರುತ್ತದೆ. ಅವರು ಹೆಂಗಸರು, ಮಕ್ಕಳನ್ನು ಈ ಬಾರಿ ಉಳಿಸಿಲ್ಲ. ಹೆಂಗಸರು ಬಹಳ ದಿನಗಳ ಕಾಲ ಸ್ವತಂತ್ರವಾಗಿ ತಿರುಗಾಡುವಂತಿಲ್ಲ'. ರಿಜ್ವಾನ ಬಯಸುವುದು ಸ್ವತಂತ್ರವಾಗಿ ತಿರುಗಾಡುವ ಸಮಯ, ಸಂದರ್ಭವನ್ನು ''ನನ್ನ ಸ್ಕೂಟರ್ ಮೇಲೇರಿ ನನಗನ್ನಿಸಿದಂತೆ ಹೋಗುವ ಸ್ವಾತಂತ್ರ. ಈಗ ನಾವು ನಮ್ಮ ಪಟ್ಟಣದಲ್ಲಿಯೇ ಬಂಧಿಗಳು. ಜನರಿಗೆ ಹಗೆ ಸಾಧಿಸುವುದು ಬೇಡವಾಗಿದೆ. ಅವರು ಮತ್ತೆ ಬದುಕಬೇಕು ಅಷ್ಟೇ!'' ಗುಜರಾತಿನಲ್ಲಿ ಮುಸ್ಲಿಂ ವಿರೋಧಿ ನಡತೆಗಳು ಈ ಕೆಳಕಂಡ ರೀತಿಯಲ್ಲಿ ಕಂಡು ಬರುತ್ತವೆ.

- ಸರ್ಕಾರ ನಮ್ಮ ವಿರುದ್ಧ ಅತ್ಯಾಚಾರ ನಡೆಸಿದವರನ್ನೇ ಪ್ಯಾಂಪರ್ ಮಾಡುತ್ತದೆ
- ನಿಜವೆಂದರೆ ಹಿಂದೂಗಳು ಶೋಷಣೆಗೆ ಒಳಗಾಗಿದ್ದಾರೆ.
- ಜನಸಂಖ್ಯೆಯಲ್ಲಿ ಅವರು ಸ್ವಲ್ಪ ದಿನಗಳಲ್ಲಿಯೇ ನಮಗಿಂತ ಹೆಚ್ಚಾಗುತ್ತಾರೆ.
- ಪ್ರಾರ್ಥನಾ ಮಂದಿರಗಳಲ್ಲಿ ಅವರು ಹಿಂಸೆ ಯನ್ನು ಟೆರೋರಿಸಂ ಅನ್ನು ಕಲಿಸಿಕೊಡುತ್ತಾರೆ.
- ಅವರು ಇಂಡಿಯಾದ ವಿರೋಧಿಗಳು ಹಾಗೂ ಪಾಕಿಸ್ತಾನದ ಪರವಾಗಿರುವವರು.
- ಕ್ರಿಕೆಟ್ ಪಂದ್ಯಗಳಲ್ಲಿ ಅವರು ಪಾಕಿಸ್ತಾನವನ್ನೇ ಸಪೋರ್ಟ್ ಮಾಡುತ್ತಾರೆ

ಈ ರೀತಿಯ ಮುಸ್ಲಿಂ - ವಿರೋಧಿ ವಿಚಾರಗಳನ್ನು ಕೆದಕುತ್ತಾ ನಡೆಯುವ ಸಂಘ ಪರಿವಾರದವರು ಶಾಂತಿಯುತವಾಗಿರುವ ಪ್ರದೇಶಗಳಲ್ಲಿ ಸಭೆಗಳನ್ನು ಮಾಡಿ ಅಲ್ಲಿರುವವರನ್ನು ಉದ್ರೇಕಿಸಲು, ಪ್ರೇರೇಪಿಸಲು ಪ್ರಯತ್ನಿಸುತ್ತಾರೆ. ಅವರು ಬಳೆಗಳನ್ನು ಒಂದು ಕೆಂಪು ಬಟ್ಟೆಯಲ್ಲಿ ಸುತ್ತಿ ಮುಸ್ಲಿಂರನ್ನೊಳಗೊಂಡು ಶಾಂತವಾಗಿರುವ ಪ್ರದೇಶಗಳಿಗೆ ಕಳಿಸುವುದನ್ನು ರೂಢಿಸಿಕೊಂಡಿದ್ದಾರೆ. ಇದರರ್ಥ ನಿಚ್ಚಳವಾಗಿದೆ. ಮುಸ್ಲಿಂರನ್ನು ಅವರ ಮನೆಗಳನ್ನು ಸುರಕ್ಷಿತವಾಗಿರಲು ಬಿಟ್ಟಿರುವ ಜನರು 'ಹೆಂಗಸತ್ವ' ಹೊಂದಿದ್ದಾರೆಂದು ಬಳೆಗಳ ಮೂಲಕ ಸೂಚಿಸುತ್ತಾರೆ. ಭಾವ್‌ನಗರ ಹಾಗೂ ಸುರೇಂದ್ರ ನಗರದಂತಹ ಪ್ರದೇಶಗಳಲ್ಲಿ ಬಳೆಗಳನ್ನು ಸೆಂಟರ್ ಪ್ರದೇಶಗಳಲ್ಲಿ ಇಟ್ಟಿರುವುದು ಕಂಡು ಬಂದಿದೆ. 'ಹಿಂದೂ ಪುರುಷತ್ವ'ವನ್ನು ಬಡಿದೆಬ್ಬಿಸುವ ಕೆಲಸವನ್ನು ಬಳೆಗಳನ್ನು ಸಾಂಕೇತಿಕವಾಗಿ ಕಳಿಸುವ ಮೂಲಕ ಮಾಡುವ ಇವರು ಆ ಪ್ರದೇಶಗಳಲ್ಲಿ ಸಭೆ ಕರೆದು ಮುಸ್ಲಿಂರನ್ನು ನಾಶಗೊಳಿಸುವುದಕ್ಕೆ ಅವರು ಏನಾದರೂ ಮಾಡಲೇಬೇಕೆಂದು ಪ್ರೇರೇಪಿಸುತ್ತಾರೆ. ಅವರು ಬಂಧಿಸಲ್ಪಟ್ಟರೆ ತಾವು ರಕ್ಷಣೆ ನೀಡುವುದಾಗಿ ಹೇಳುತ್ತಾರೆ. ಈ ಸಭೆಗಳಲ್ಲಿ ಸೆಲ್ ಫೋನ್ ನಂಬರ್ ಕೊಡಲಾಗುತ್ತದೆ. ಈ ಮೂಲಕ ಅವರು ಸಾಧನಗಳನ್ನು ಅಂದರೆ ಕತ್ತಿ, ಚಾಕು, ಚೂರಿಗಳನ್ನು ತಮ್ಮ ಆತ್ಮರಕ್ಷಣೆಗೆಂದು

ಪಡೆಯಬಹುದಾಗಿದೆ. ಈ ರೀತಿ ಸಂಘಟನೆ ಮಾಡುತ್ತಾ ಮುಸ್ಲಿಂ ವಿರೋಧಿ ಭಾವನೆಗಳನ್ನು ಪ್ರೇರೇಪಿಸುವ ಹಾಗು ಹಿಂಸಾಚಾರಕ್ಕೆ ಇಳಿಯುವ ಮೂಲಕ ಮೇಲಿನ ಮುಸ್ಲಿಂ ವಿರೋಧಿ ವಿಚಾರಧಾರೆಯನ್ನು ಜನರಲ್ಲಿ ಬಿತ್ತಲು ಸಂಘ ಪರಿವಾರದವರು ಸಂಘಟಿತರಾಗಿ ಕೆಲಸ ಮಾಡುತ್ತಾರೆ.

ಇಂತಹ ದ್ವೇಷದ ದಳ್ಳುರಿಯ ಮಧ್ಯೆ ಕೂಡಾ ವರದಿಯ ಲೇಖಕಿಯರು ಮಾನವೀಯತೆಯ ಕ್ಷಣಗಳನ್ನು, ಪ್ರೀತಿಯ ಎರಕಗಳನ್ನು ಹಿಂದು-ಮುಸ್ಲಿಂ ಮಧ್ಯೆ ಕಂಡದ್ದನ್ನು ವಿವರಿಸುತ್ತಾರೆ. ಕ್ರಿಶನ್ ನಗರ, ವಡೋದಾರದ ಪುಟ್ಟ ಹಳ್ಳಿ ಇಲ್ಲಿ ಬಡ ಹಿಂದೂಗಳು ಹಾಗೂ ಬಡ ಮುಸ್ಲಿಂರು ಸಮಾನ ಸಂಖ್ಯೆಯಲ್ಲಿ ಇದ್ದಾರೆ. ವರದಿಯ ಲೇಖಕಿಯರು ಶ್ರೀ ಪಿಲ್ಲಾಯಿ ಎಂಬುವರ ಮನೆಗೆ ಭೇಟಿ ಇತ್ತಿದ್ದರು. ಪಿಲ್ಲಾಯಿ 500 ಜನ ಮುಸ್ಲಿಂರಿಗೆ ತನ್ನ ಮನೆಯಲ್ಲಿ ಆಶ್ರಯ ಕೊಡುವ ಮೂಲಕ ಅವರಿಗೆ ರಕ್ಷಣೆ ನೀಡಿದ್ದರು. ಹಿಂದೂ-ಮುಸ್ಲಿಂರು ಒಟ್ಟಾಗಿ ಅವರಿವರ ಮನೆಯ ಸಮಾರಂಭಗಳಿಗೆ ಹೋಗುತ್ತಿರುವಾಗ ಜನರ ದಂಡು ಆಕ್ರಮಣ ನಡೆಸುವ ಸುಳಿವು ಶ್ರೀ ಪಿಲ್ಲಾಯಿ ಹಾಗೂ ಅವರ ಹೆಂಡತಿಗೆ ದೊರೆಯಿತು. ಹಾಗಾಗಿ ತಮ್ಮ ಇತರೆ ಮೂವರ ಸಹೋದರರೊಡಗೂಡಿ, ಸದ್ದಿಲ್ಲದೇ ಮುಸ್ಲಿಂ ಕುಟುಂಬದವರನ್ನೆಲ್ಲ ತಮ್ಮ ಮನೆಗಳಿಗೆ ಸಾಗಿಸಿದರು. ಎಲ್ಲರೂ ಸೇರಿ 24 ಘಂಟೆಗಳ ಕಾಲ ಮುಸ್ಲಿಂರನ್ನು ತಮ್ಮ ಮನೆಗಳಲ್ಲಿ ಇಟ್ಟುಕೊಂಡು ನಂತರ ಕೊರೇಶೀ ಜಮ್ಮಾ ಖಾನಕ್ಕೆ ಸುರಕ್ಷಿತವಾಗಿ ತಲುಪಿಸಿದರು.

ಸಬ್ರಕಾಂತ್ ಹಾಗೂ ಪಂಚಮಹಲ್‌ನಲ್ಲಿ ಅನೇಕ ಹೆಂಗಸರು ಹಾಗು ಮಕ್ಕಳು ಕಾಡಿನಲ್ಲಿ ಅಡಗಿಕೊಂಡಿರುವಾಗ ಆದಿವಾಸಿಗಳ ಸಹಾಯ ಪಡೆದಿದ್ದರು. ಡೆರೋಲ್ ಹಳ್ಳಿಯ ಕಾನಿಜಾ ಘಾಟ, ವಡಾಲ ಆಶ್ರಯ ತಾಣದಲ್ಲಿ ಮಾರ್ಚ್ 28, 2002ರಂದು ಹೇಳಿದ ಪ್ರಕಾರ:

"ನಾನು ನನ್ನ ಮಕ್ಕಳೊಂದಿಗೆ ಕಾಡಿಗೆ ಓಡಿಹೋಗಿ ಆರು ದಿನಗಳ ಕಾಲ ಅಲ್ಲಿಯೇ ತಿರುಗುತ್ತಿದ್ದೆ. 7ನೆಯ ದಿನ ಆದಿವಾಸಿಗಳು ನಮ್ಮನ್ನು ಕಂಡು ಎರಡು ದಿನಗಳ ಕಾಲ ನಮ್ಮನ್ನು ನೋಡಿಕೊಂಡರು. ಅವರು ಡೆರೋಲ್‌ನಿಂದ ಬಂದ ನಿರಾಶ್ರಿತರಿಗೆಲ್ಲ ಆಶ್ರಯ ನೀಡಿದ್ದರು. ನಾವು 13 ಜನರನ್ನು ಅವರು ರಕ್ಷಿಸಿದರು".

ಆಯೂಬ್ ಹನ್ನೆರಡು ವರ್ಷದ ಹುಡುಗ - ಲಿಮೆಕೆಡಾ ಹಳ್ಳಿಯ ನಿವಾಸಿ. ಹಲೋಲ್ ಆಶ್ರಯ ತಾಣದಲ್ಲಿ ಮಾರ್ಚ್ 30, 2002ರಂದು ಹಂಚಿಕೊಂಡ ಅನುಭವ:

"ನನ್ನ ಅಕ್ಕ ಫರ್‌ಜಾನಾ ಮತ್ತು ಸಹೋದರ ಸಿಖಂದರ್ ಒಂದು ಮೈದಾನಕ್ಕೆ ಓಡಿ ತಪ್ಪಿಸಿಕೊಂಡಿದ್ದರು. ಜನರ ದಂಡು ನನ್ನ ಸಂಬಂಧಿಗಳನ್ನು ಬೆತ್ತಲೆಗೊಳಿಸಿದ್ದನ್ನು ಥಳಿಸಿದ್ದನ್ನು ಪೊದೆಗಳ ಹಿಂದಿನಿಂದ ನನ್ನ ಕಸಿನ್ ಮುಷರತ್, ಮೋಸಿನ್ ಮತ್ತು ಶಿರಾಜ್ ಜೊತೆಗೂಡಿ ನಾನು ಕಂಡಿದ್ದೆ. ಆನಂತರ ನಾವೂ ಮೈದಾನದ ಕಡೆಗೆ ಓಡಿದೆವು. ಒಬ್ಬ ಕಾಕಾ ನನ್ನ ಸಹೋದರ, ಸಹೋದರಿ ಓಡಿದತ್ತ ಕೈ ಮಾಡಿ ತೋರಿಸಿದರು. ನಾವು ಅತ್ತ ಒಡಿದೆವು. ರಾತ್ರಿಯಾದಾಗ ಶಿಖಂದರ್ ಹಾಗೂ ಶಿರಾಜ್ ಹಸಿವೆ, ಬಾಯಾರಿಕೆಯಿಂದ ಅಳುತ್ತಿದ್ದರು. ನಾವು ಬ್ಯಾಟರಿಯ ಬೆಳಕು ಕಂಡೆವು. ಕಾಕಾ ಮತ್ತು ಅವರ ಹೆಂಡತಿ ನಮ್ಮನ್ನು ಕರೆದೊಯ್ಯಲು ಬಂದಿದ್ದರು. 7 ದಿನಗಳ ಕಾಲ ಅವರು ನಮ್ಮನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡು ಆಹಾರ ಒದಗಿಸಿದ್ದರು. ಸ್ಥಳೀಯ ಸರ್‌ಪಂಚ್ ಹಾಗೂ ನಾಯಕರೊಂದಿಗೆ ಮಾತನಾಡಿ ಹಲೋಲ್‌ಗೆ ತಪ್ಪಿಸಿಕೊಂಡು ಹೋದ ನಮ್ಮ ತಾಯಿಯವರನ್ನು ಪತ್ತೆ ಹಚ್ಚಿದರು. ಹಾಗಾಗಿ ನಾವು ಇಲ್ಲಿಗೆ ಬಂದೆವು".

ಹೀಗೆ ಹಲವಾರು ಕಡೆ ಸಾಮಾನ್ಯ ಹಿಂದೂಗಳು, ಆದಿವಾಸಿಗಳು, ಇತರರು ಮುಸ್ಲಿಂರನ್ನು ಸಂರಕ್ಷಿಸಿದ ಕ್ಷಣಗಳು ಮಾನವೀಯತೆಯ ಭರವಸೆಯ ಬೆಳಕನ್ನು ನೀಡುತ್ತವೆ.

## ಪೋಲೀಸರ ಪಾತ್ರ

ಈ ಸಲದ ಕೋಮು ದಳ್ಳುರಿಯಲ್ಲಿ ಮುಖ್ಯ ಬಲಿಪಶುಗಳು ಮಹಿಳೆಯರು. ಬೆಂಕಿಗಾಹುತಿಯಾದ ಮನೆಗಳಿಂದ ತಳ್ಳಲ್ಪಟ್ಟು, ಹಿಂಸಾಚಾರದ ಬೀದಿಗಳಲ್ಲಿ ಜೀವಕ್ಕಾಗಿ ಓಡಿಹೋಗಿ, ಅತ್ಯಾಚಾರಕ್ಕೊಳಗಾಗಿ ಬೆಂಕಿಯಲ್ಲಿ ಬೆಂದು ಹೋಗಿ ಕತೆಯಾಗಿರುವವರು ಹಲವಾರು ಮುಸ್ಲಿಂ ಮಹಿಳೆಯರು. ಪೋಲೀಸ್ ಕೂಡಾ ಈ ಹಿಂಸಾಚಾರದಲ್ಲಿ ಮೌನವಾಗಿ, ಮೂಕ ಪ್ರೇಕ್ಷಕರಾಗಿ ಸಹಕಾರ ನೀಡಿದ್ದು ಕ್ಷಮಿಸಲಾರದ ಅಪರಾಧ. ಗುಜರಾತ್ ಮುಖ್ಯಮಂತ್ರಿ "ಪೋಲೀಸಿನವರೂ ಮನುಷ್ಯರು" ಹಾಗೂ "ಸಮಾಜದ ಭಾವನೆಗಳಿಗೆ ಅವರು ನಿರ್ಲಿಪ್ತರಾಗಿರುವುದಿಲ್ಲ" ಎಂದಿದ್ದರು. ಯಥಾರ್ಥವಾಗಿ ಕೋಮು ದಳ್ಳುರಿಯಲ್ಲಿ ಹೆಚ್ಚು ಕಡೆ ಪೋಲೀಸರು ಸಹಕರಿಸಿದ್ದು, ಅವರ

ಜೊತೆಗಿದ್ದದ್ದು ಇದೆ. ಗುಂಪು ಘರ್ಷಣೆಯಲ್ಲಿ ಗುಂಡು ಹಾರಿಸಿದ ಪೋಲೀಸರು ಮುಸ್ಲಿಂರ ಕಡೆಗೇ ಗುಂಡು ಹಾರಿಸಿದ್ದು ಗಮನಕ್ಕೆ ಬಂದಿದೆ. ಹೆಂಗಸರು ರಕ್ಷಣೆಗಾಗಿ ಬೇಡಿದಾಗ ತಮ್ಮ ಕಿವುಡು ಕಿವಿಗಳಿಂದ ''ತಮಗೆ ಮೇಲಿನವರ ಆದೇಶ ಬಂದಿದೆ, ಸಹಾಯ ನೀಡಬಾರದೆಂದು'' ಎಂದು ಪ್ರತಿಕ್ರಿಯೆ ನೀಡಿದ್ದಾರೆ. ಪೋಲೀಸ್ ಚೌಕಿಗಳಿಂದ, ಪೋಲೀಸ್ ಸ್ಟೇಷನ್‌ಗಳಿಂದ ಹೋಗಿ ಬೇರೆ ಕಡೆ ರಕ್ಷಣೆ ಮಾಡಿಕೊಳ್ಳಿ ಎಂದು ಮುಸ್ಲಿಂ ಹೆಂಗಸರು, ಮಕ್ಕಳನ್ನು ವಾಪಸ್ಸು ಕಳಿಸಿದ್ದು ಇದೆ. ಪೋಲೀಸರು ಮಾಡಿದ ಉತ್ತಮ (?) ಕೆಲಸವೆಂದರೆ ಭಯಸ್ತ ಮುಸ್ಲಿಂರನ್ನು ಮುಸ್ಲಿಂರು ಹೆಚ್ಚಿರುವ ಜಾಗಗಳಿಗೆ ಸಾಗಿಸಿದ್ದು. ಮುಸ್ಲಿಂರನ್ನು ರಕ್ಷಿಸುವ ಜವಾಬ್ದಾರಿ ಮುಸ್ಲಿಂರದ್ದೇ ಎನ್ನುವ ವಿಚಾರವನ್ನು ಈ ಮೂಲಕ ಅವರು ಸ್ಪಷ್ಟವಾಗಿ ತಿಳಿಸಿದ್ದರು. ಮಹಿಳೆಯರು ಅಘಾದವಾದ ಪ್ರಮಾಣದಲ್ಲಿ ದೌರ್ಜನ್ಯಕ್ಕೆ ಒಳಗಾಗಿದ್ದರೂ ಮಹಿಳಾ ಪೋಲೀಸ್ ಪಡೆಯನ್ನು ಹಾಕುವ ಯತ್ನಗಳೇ ನಡೆಯಲಿಲ್ಲ. ಎಫ್.ಐ.ಆರ್. ದಾಖಲಿಸುವಲ್ಲಿ ಪೋಲೀಸರು ಸೋತಿದ್ದಾರೆ. 'ಸಾಕ್ಷಿಗಳು ಇಲ್ಲ ಹಾಗಾಗಿ ಎಫ್.ಐ.ಆರ್. ದಾಖಲಿಸಲಿಕ್ಕೆ ಸಾಧ್ಯವಿಲ್ಲ' ಎನ್ನುವುದು ಅವರ ವಾದವಾಗಿತ್ತು. ಬಲಾತ್ಕಾರಕ್ಕೊಳಗಾದ ಹೆಂಗಸರು ಹಿಂದೂ ಪೋಲೀಸರ ಭಯದಿಂದಾಗಿ ಪೋಲೀಸರ ನೆರವನ್ನು ಕೇಳುವುದನ್ನೇ ಬಿಟ್ಟಿದ್ದರು.

ಇಂತಹ ಆತಂಕದ ಕ್ಷಣಗಳಲ್ಲೂ ಗುಜರಾತಿನ ಕೆಲವು ಪ್ರದೇಶಗಳಲ್ಲಿ ಎಲ್ಲಿ ಪೋಲೀಸ್ ಹಾಗೂ ಆಡಳಿತಾತ್ಮಕ ಬಿಗಿ ಇತ್ತೋ ಅಂತಹ ಕಡೆಗಳಲ್ಲಿ ಸ್ಫೂರ್ತಿದಾಯಕ ಕೋಮು ದಳ್ಳುರಿ ಕಂಡು ಬಂದಿಲ್ಲ. ಮಾರ್ಚ್ 5 ರವರೆಗೆ ಪಂಚಮಹಲ್ ಜಿಲ್ಲೆಯಲ್ಲಿ ಯಾವುದೇ ಅಹಿತಕರ ಘಟನೆ ಕಂಡು ಬಂದಿರಲಿಲ್ಲ. ಹಾಗೆಯೇ ಕೋಮುಗಲಭೆಗಳಿಗೆ ಕಾರಣವಾದ ಗೋದ್ರ ಪಟ್ಟಣದಲ್ಲಿಯೂ ಸಹ ಇದಕ್ಕೆ ಕಾರಣ ಜಿಲ್ಲಾಧಿಕಾರಿಯಾಗಿದ್ದ ಜಯಂತಿ ರವಿಯ ಪ್ರಾಮಾಣಿಕ ಪ್ರಯತ್ನದಿಂದ ಎಂದು ವರದಿಯ ಲೇಖಕಿಯರು ನಂಬುತ್ತಾರೆ.

ವರದಿಯ ಲೇಖಕಿಯರು ಕಣ್ಣಾರೆ ಕಂಡ ಸಾಕ್ಷಿಗಳ, ಸಂದರ್ಶನಗಳ ಹಾಗೂ ನಡೆಸಿದ ಅಧ್ಯಯನ, ದಾಖಲಾತಿಗೆ ಸಂಗ್ರಹಣೆಯ ಮೂಲಕ ಗುಜರಾತಿನ 5 ಜಿಲ್ಲೆಗಳಲ್ಲಿ 27ರಿಂದ 31-2002 ರವರೆಗೆ ನಡೆಸಿದ ವಿವರವಾದ ಅಧ್ಯಯನಗಳ ಮೂಲಕ ಮಹಿಳೆಯರಿಗೆ ಸಂಬಂಧಿಸಿದಂತೆ ಈ ಕೆಳಕಂಡ ಸಲಹೆಗಳನ್ನು ಮಾಡಿರುತ್ತಾರೆ.

1. ಲೈಂಗಿಕ ಹಿಂಸೆಯ ಬಗ್ಗೆ ನಿರ್ಲಕ್ಷ್ಯ ಇದೆ. ವಿಶೇಷವಾಗಿ ಹಳ್ಳಿಗಾಡುಗಳಲ್ಲಿ ಮಹಿಳೆಯರ ಮೇಲೆ ತೀವ್ರವಾಗಿ ನಡೆದ ಅಪರಾಧದ ರೀತಿ, ಅಪರಾಧಗಳ ಬಗ್ಗೆ ಅವರಿಂದಲೇ ಹೇಳಿಕೆಗಳನ್ನು ಪಡೆಯಬೇಕು. ಈ ಕೆಲಸ ಜಾಗ್ರತವಾಗಿ ಅಂದರೆ ಹಿಂಸೆಗೊಳಗಾದ ಮಹಿಳೆಯರು ಆಶ್ರಿತ ತಾಣಗಳನ್ನು ಬಿಡುವ ಮುಂಚೆಯೇ ನಡೆಯಬೇಕು.

2. ಎಫ್.ಐ.ಆರ್ ಗಳನ್ನು ಬೇಗನೇ ದಾಖಲಿಸಬೇಕು. ಇದಕ್ಕಾಗಿ ವಿಶೇಷ ಪಡೆಗಳನ್ನು ಗುಜರಾತಿನ ಹೊರಗಡೆಯ ಜನರನ್ನೊಳಗೊಂಡು ರಚಿಸಬೇಕು. ಈಗಾಗಲೇ ದಾಖಲಾಗಿರುವ ಎಫ್.ಐ.ಆರ್‌ಗಳನ್ನು ಈ ಪಡೆ ಮತ್ತೊಮ್ಮೆ ಅವಲೋಕಿಸಬೇಕು. ಈ ವಿಶೇಷ ಪಡೆಯಲ್ಲಿ ಕಾನೂನು ತಜ್ಞರು, ಮಹಿಳಾ ಪೋಲೀಸ್ ಅಧಿಕಾರಿಗಳು, ಮಹಿಳಾ ಹಕ್ಕುಗಳ ಕಾರ್ಯಕರ್ತೆಯರು, ಮುಸ್ಲಿಂ ಸಮುದಾಯದ ನಾಯಕಿಯರು ಇದ್ದು, ಒಬ್ಬ ಹಿರಿಯ ಮಹಿಳಾ ಐ.ಎ.ಎಸ್ ಅಧಿಕಾರಿಣಿಯ ನೇತೃತ್ವದಲ್ಲಿ ಈ ಪಡೆ ಕೆಲಸ ಮಾಡಬೇಕು. ನಿರ್ದಿಷ್ಟ ಸಮಯದೊಳಗೆ ಹಿಂಸಾಚಾರಕ್ಕೊಳಗಾದ ಮಹಿಳೆಯರಿಗೆ ನ್ಯಾಯ ಸಿಗುವಂತೆ ಮಾಡಬೇಕು.

3. ಅತ್ಯಾಚಾರದ ಕೇಸುಗಳಿಗೆ - ವೈದ್ಯಕೀಯ ಪರೀಕ್ಷೆಗಳನ್ನು ಮುಖ್ಯ ಸಾಕ್ಷಿಗಳೆಂದು ಗಮನಿಸಬಾರದು. ಏಕೆಂದರೆ ಮಹಿಳೆಯರ ಹೇಳಿಕೆಗಳನ್ನು ಗಮನಿಸಿದರೆ ಅವರು ಘಟನೆಯ ನಂತರ ಎಲ್ಲಿಯೋ ಓಡಿ ಹೋಗಿರುವುದರಿಂದ ವೈದ್ಯಕೀಯ ನೆರವಿನ ಪ್ರಶ್ನೆ ಅಸಾಧ್ಯವಾಗಿತ್ತು. ವೈದ್ಯಕೀಯ ಪರೀಕ್ಷೆ ಬಗ್ಗೆ ಹಾಗೆ ನೋಡಿದರೆ ಕೇಳಲೇ ಬಾರದು.

4. ವಿಶೇಷ ಸಂದರ್ಭಗಳಲ್ಲಿ ಈ ರೀತಿಯ ದೈಹಿಕ ಹಿಂಸೆಗೆ ಮಹಿಳೆಯರು ಒಳಗಾಗಿರುವುದರಿಂದ, ನ್ಯಾಯ ಕೇಳಲು ಯಾವುದೇ ಸರ್ಕಾರಿ ಅಂಗಗಳೂ ಆ ಸಮಯದಲ್ಲಿ ಎಟುಕದೇ ಇರುವುದರಿಂದ ಈಗಿರುವ ಕಾನೂನಿನ ಚೌಕಟ್ಟಿನ ವಿವರಗಳೊಳಗೆ ಇವರನ್ನು ನೋಯಿಸಬಾರದು. ಎಫ್.ಐ.ರ್. ದಾಖಲಿಸಿದ ಮಹಿಳೆಯರ ಸಂದರ್ಭದಲ್ಲಿ ಅವರ ಹೇಳಿಕೆಗಳನ್ನೇ ಮೂಲವಾಗಿಟ್ಟುಕೊಂಡು ಕಾನೂನು ಕ್ರಮ ಜರುಗಿಸಬೇಕಾಗುತ್ತದೆ.

5. ಕೇಸುಗಳನ್ನು ದಾಖಲಿಸುವ ಮೊದಲು ಮಹಿಳೆಯರಿಗೆ ಕೌನ್ಸಲಿಂಗ್ ನೀಡಬೇಕು. ಹಾಗೆ ಮಾಡಿದಾಗ ಮಹಿಳೆಯರು ಎಲ್ಲ ವಿವರಗಳನ್ನು ಹೇಳಲು ಸಾಧ್ಯವಾಗುತ್ತದೆ. ಏಕೆಂದರೆ ನಡೆದ ಭಯಾನಕ ಹಿಂಸೆಯ ನೆರಳಲ್ಲಿ ಅವರು ಮಾತನಾಡುವುದಕ್ಕೇ ಕಷ್ಟಪಡುತ್ತಾರೆ. ಮಾನಸಿಕ ಅಘಾತಕ್ಕೆ ಒಳಗಾದ ಹೆಂಗಸರಿಗೆ ಕೌನ್ಸಲಿಂಗ್

ನೀಡುವ ತಜ್ಞರಿಗೆ ಈ ಕೆಲಸ ನೀಡಬೇಕಾಗುತ್ತದೆ.

6. ಹಿಂಸೆಗೊಳಗಾದ ಮಹಿಳೆಯರ ಜೊತೆ ಕೆಲಸ ಮಾಡುವುದಕ್ಕೆ ಮಹಿಳಾ ಹಕ್ಕು ರಕ್ಷಣೆಯ ಕಾರ್ಯಕರ್ತೆಯರಿಗೆ ಅವಕಾಶವಿರಬೇಕು. ಜೊತೆಗೆ ಅವರಿಗೆ ಪೋಲೀಸ್ ರಕ್ಷಣೆ ನೀಡಬೇಕು. ಅವರನ್ನು ಹಿಂಸಿಸುವವರ ವಿರುದ್ಧ ಕಠಿಣವಾದ ಕ್ರಮ ಜರುಗಿಸಬೇಕು.

7. ಆಶ್ರಯ ತಾಣಗಳಲ್ಲಿ ಉತ್ತಮ ಆರೋಗ್ಯದ ಸೌಲಭ್ಯಗಳನ್ನು ಒದಗಿಸಬೇಕು. ಗರ್ಭಿಣಿ ಹಾಗೂ ಮಾನಸಿಕ ಆಘಾತಕ್ಕೆ ಒಳಗಾದ ಹೆಂಗಸರ ಆರೋಗ್ಯದ ಬಗ್ಗೆ ಕಾಳಜಿ ನೀಡುವ ಸೌಲಭ್ಯಗಳನ್ನು ಒದಗಿಸಬೇಕು.

8. ಲೈಂಗಿಕ ದೌರ್ಜನ್ಯಕ್ಕೊಳಗಾಗಿ ದಹಿಸಲ್ಪಟ್ಟ ಮಹಿಳೆಯರ ಕುಟುಂಬಗಳಿಗೆ, ಅತ್ಯಾಚಾರಕ್ಕೊಳಗಾಗಿ ಬದುಕುಳಿದ ಮಹಿಳೆಯರಿಗೆ ಮರುವಸತಿ ಕಾರ್ಯಕ್ರಮ ಯೋಜನೆಯನ್ನು ತಕ್ಷಣವೇ ನೀಡಬೇಕು.

9. ಸರ್ಕಾರದ ಉಪೇಕ್ಷೆ ಹಾಗೂ ರಾಷ್ಟ್ರೀಯ ಮಹಿಳಾ ಆಯೋಗದ ಉಪೇಕ್ಷೆಯ ಹಿನ್ನಲೆಯಲ್ಲಿ ಯು.ಎಸ್.ನ ಮಹಿಳಾ ಹಿಂಸಾಚಾರದ ವಿರುದ್ಧದ ವಿಶೇಷ ಪಡೆಗೆ ಮುಂದಿನ ಶೋಧನೆ ಹಾಗೂ ಅಸೆಸ್‌ಮೆಂಟಿನ ಜವಾಬ್ದಾರಿ ನೀಡಬೇಕು.

10. ಮಹಿಳೆಯರೇ ನಡೆಸಬೇಕಾದ ಕುಟುಂಬದ ವಿವರಗಳ ಪತ್ತೆ ಹಚ್ಚಿ ಮರುವಸತಿ ಸೌಲಭ್ಯ, ಕಲ್ಪಿಸಿಕೊಡಬೇಕು. ಇದಕ್ಕಾಗಿ ವಿಶೇಷ ತಜ್ಞರ ಪಡೆಯೊಂದು ರಚಿತವಾಗಿ ಈ ಬಗ್ಗೆ ವಿವರ ಕೊಡಬೇಕು. ಸರ್ಕಾರದ ಸಹಾಯದಿಂದ ಇದು ನಡೆಯಬೇಕು. ಅನಾಥ ಹಾಗೂ ವಿಧವೆಯರ ಮಕ್ಕಳಿಗೆ ವಿಶೇಷ ರಿಯಾಯಿತಿ, ಸೌಲಭ್ಯಗಳನ್ನು ನೀಡಬೇಕು.

11. ಪರಿಹಾರ ಕಾರ್ಯದಲ್ಲಿ - ಮರು ವಸತಿಯನ್ನು ಒಂದು ಪ್ರತ್ಯೇಕ ಸಮಸ್ಯೆಯಾಗಿಯೇ ಪರಿಗಣಿಸಿ ಕಾರ್ಯಕ್ರಮ ಯೋಜಿಸಬೇಕು. ಪರಿಹಾರ ಕಾರ್ಯವೆಂದರೆ ಆ ತಕ್ಷಣದ ಮರುವಸತಿ ಅಥವಾ ಆ ತಕ್ಷಣ ನೀಡುವ ಪರಿಹಾರವೆಂದು ಪರಿಗಣಿಸಬಾರದು.

12. ಸರ್ಕಾರ 'ಶಾಂತಿ' ಕಮಿಟಿ ರಚಿಸುವುದನ್ನು ಮೌಲಿಕವಾಗಿ ತೂಗಿ ನೋಡಬೇಕು. ಹಿಂಸಾಚಾರದ ಇಡಿಯ ಹಂತದಲ್ಲಿ ಬೇಜವಾಬ್ದಾರಿಯಿಂದ ವರ್ತಿಸಿದ, ಜವಾಬ್ದಾರಿ ಇಲ್ಲವೆಂದು ನಿರ್ವಿಕಾರದಿಂದ ವರ್ತಿಸಿದ ಸರ್ಕಾರ ಈ 'ಶಾಂತಿ ಕಮಿಟಿ' ಗಳಿಂದ ನಂಬಿಕೆ, ವಿಶ್ವಾಸವನ್ನು ಮತ್ತೆ ಕಟ್ಟಲು ಸಾಧ್ಯವೇ ಎಂಬುದನ್ನು ಪರಿಶೀಲಿಸಬೇಕಾಗುತ್ತದೆ.

– ಕನ್ನಡಕ್ಕೆ ಚಂಪಾವತಿ. ಹೆಚ್.ಎಸ್

ಕೋಮು ಗಲಬೆಯಂತಹ ವಿದ್ಯಮಾನದ ಬಗ್ಗೆ ಪತ್ರಿಕಾ ವರದಿಗಳೇ ನಮ್ಮ ಏಕಮಾತ್ರ ದಾಖಲೆಯಾಗಬಾರದು. ಕೋಮುಗಲಭೆಗಳ ಬಗ್ಗೆ ಇತ್ತೀಚಿನ ನಮ್ಮ ಪ್ರತಿಷ್ಠಿತ ಪತ್ರಿಕೆಗಳು ಕೂಡ ಅನುಸರಿಸುತ್ತಿರುವ ಪಕ್ಷಪಾತದ ಧೋರಣೆಯ ಹಿನ್ನಲೆಯಲ್ಲಿ ಘಟನೆಗಳ ಕುರಿತ ವಸ್ತುನಿಷ್ಠ ದಾಖಲೆಗಳ ನಿರ್ಮಾಣ ಜರೂರಿನಿಂದ ಆಗಬೇಕಾದ ಕೆಲಸವಾಗಿದೆ. ಕರ್ನಾಟಕದಲ್ಲಿ ಈ ಹಿಂದೆ, ಬೆಂಗಳೂರು, ರಾಮನಗರ, ಶಿವಮೊಗ್ಗ, ಹುಬ್ಬಳ್ಳಿ, ಗುಲ್ಬರ್ಗಾ ಮುಂತಾದೆಡೆ ನಡೆದ ಕೋಮುಗಲಭೆಗಳ ಕುರಿತು ಅಧ್ಯಯನವೇ ನಡೆದಿಲ್ಲ. ಬಹುಶಃ ಕರ್ನಾಟಕದ ಅತಿ ದೊಡ್ಡ ಪತ್ರಿಕಾ ವರದಿಗಳನ್ನು ಹೊರತುಪಡಿಸಿ ಬೇರೆ ಬಗೆಯ ಮಾಹಿತಿ ಸಂಗ್ರಹ ವಿಶ್ಲೇಷಣೆ ಮುಂತಾದ್ದು ನಡೆದಿದೆಯೇ? ನಮಗೆ ಗೊತ್ತಿರುವ ಮಟ್ಟಿಗೆ ಇಲ್ಲ. ಇದು ನಮ್ಮ ಕಾಲದ ದುರಂತಗಳಿಗೆ ಸಾಕ್ಷಿ ಹೇಳಲಾರದ ನಮ್ಮ ನೈತಿಕ ದೌರ್ಬಲ್ಯ ಮಾತ್ರವಲ್ಲ, ನಮ್ಮ ರಾಜಕೀಯ ನಿಲವುಗಳಿಗೆ ನಿಜ ಜೀವನದ ಸಾಕ್ಷ್ಯಾಧಾರಗಳು ಇರಬೇಕು ಎಂದು ಒತ್ತಾಯ ಮಾಡಲಾರದ ಬೌದ್ಧಿಕ ದಾರಿದ್ರ್ಯ ಕೂಡ ಈ ಔದಾಸೀನ್ಯಕ್ಕೆ ಕಾರಣ. ಕೋಮುಗಲಭೆಯಂತಹ ದುರಂತದ ಬಗ್ಗೆ ನಾವು ವಹಿಸುವ ಮೌನ, ನಮ್ಮನ್ನು ಕೋಮುವಾದಿಗಳ ಮೂಕ ಸಹವರ್ತಿಗಳನ್ನಾಗಿ ಮಾಡಬಹುದು.

ಜಿ. ರಾಜಶೇಖರ
ಕೆ. ಫಣಿರಾಜ
ಫಕೀರ್ ಮಹಮ್ಮದ್ ಕಟ್ಪಾಡಿ

# ಎಂತಹ ಸುಂದರ ಹೆಸರುಗಳು !

ಎಂತಹ ಸುಂದರ ಹೆಸರುಗಳು !
ರಾಮ್ ಬರೋಸೆ, ಪ್ಯಾರೇಲಾಲ್
ರಾಮ್ ದುಲಾರಿ, ಫಾತಿಮಾ ಜೆಹ್ರಾ
ಕರಾಮಲಿ
ಕೃಷ್ಣಮುರಾರಿ, ಬನ್ಸಿದರ್
ಜೋಸೆಫ್, ಮೋಸಸ್, ಅಬ್ರಾಹಂ
ಹರ್‌ಮಿಂದರ್ ಸಿಂಗ್, ಬೇಡಿ, ಗ್ಯಾನಿ
ಬೆಲ್ಲದಂತೆ ಸವಿಯಾದ
ಸುಂದರ, ರಂಗಿನ ಹೆಸರುಗಳು
ಹೆಸರಿನ ಅಲೆಗಳೊಳಗೆ
ಸಂಸ್ಕೃತಿಯ ಗಂಗೆ ಹರಿವಳು
ಹಳ್ಳಿಯ ಚೆಂಡು ಹೂ
ಪಟ್ಟಣದ ಸಂಪಿಗೆ
ನಕ್ಕು ಕಂಪು ಸೂಸುತ್ತವೆ.
ಎಲ್ಲ ಪವಿತ್ರ ಹೆಸರುಗಳು
ಕತ್ತಿ, ಚಾಕು, ತ್ರಿಶೂಲಗಳಾಗಿವೆ
ಚೆಂಡು ಹೂ, ಸಂಪಿಗೆ, ಫಾತಿಮ ಜೆಹ್ರಾ
ಗಾಯದ ಕಪ್ಪು ಕಾಡಿನೊಳಗೆ
ಕಳೆದು ಹೋಗಿವೆ
ರಕ್ತದೋಕುಳಿಯೊಳಗೆ
ಸಂಸ್ಕೃತಿ, ಸಂಪ್ರದಾಯಗಳು ಮುಳುಗಿಹೋಗಿವೆ
ಹಗಲು ರಾತ್ರಿಗಳು ರೋದನಗಳೊಳಗೆ ನರಳುತ್ತಿವೆ
ಇವೆಲ್ಲಾ ಹೇಗಾಯಿತು ?
ಕತ್ತಲ ರಾಜಕೀಯ ಹಾಡುತ್ತಿದೆ
ಕತ್ತಿಗಳು ಕುಣಿಯುತ್ತಿವೆ
ನಮ್ಮನ್ನು ತುಳಿದು
ಮೇಲೆದ್ದು ಬಂದರು ನಾಯಕರುಗಳು
ದೇವ ಮಾನವರಾಗಿ
ಅವತಾರಗಳಾಗಿ
ಕುರಾನ್ ಗೀತೆ ಬೈಬಲ್ ಕೈಲಿ ಹಿಡಿದು
ಈ ನಾಯಕರುಗಳು ಮಾತನಾಡಿದರೆ
ಪ್ರವಚನದ ಧಾರೆ ಹರಿದು
ಗಾಯಗಳು ಮಿಂದವು
ಕಲೆ ಉಳಿಯಿತು
ಉಳಿದು ಬೆಳೆಯಿತು
ಕಪಟದ ಕಣ್ಣೀರು ರಕ್ತದ ಕಲೆ ತೊಳೆಯದು
ಬದಿಗಿಡಿ ನಿಮ್ಮ
ಗೀತೆ, ಕುರಾನ್, ಬೈಬಲ್‌ಗಳ ಕಪಾಟಿನೊಳಗೆ
ಅದರೊಳಗಿನದೇನೆಂದು ನಿಮಗೆ ತಿಳಿಯದು
ನಿಮ್ಮ ಹಿತಾಸಕ್ತಿಗಷ್ಟೆ ಅವನ್ನು ಬಳಸಿಕೊಂಡಿದ್ದೀರಿ
ನೀವೇನೂ ಮಾಡಲಾರಿರಿ
ನಮ್ಮ ಹೃದಯದ
ಅಗ್ನಿ ಪರ್ವತದೊಳಗಿಂದ
ನಾವೆದ್ದು ಬರುವೆವು
ಆಗ
ತಮ್ಮ ರಕ್ತದ ಕಲೆಗಳು
ಸೂರ್ಯನಂತೆ ಬೆಳಗಿ
ಮೊಳಕೆಗಳು ಚಿಗುರುವುವು

– ಸರ್ದಾರ್ ಜೆಫ್ರಿ

ಖುರಾನನ್ನು, ಭಗವದ್ಗೀತೆ ಶಾಶ್ವತ ಅಂತ ತಿಳಿದುಕೊಂಡ್ರೆ, ಮುಗಿದ್ಹೋಯ್ತು – ಅವನು ರಾಕ್ಷಸ ಆಗ್ಬಿಡ್ತಾನೆ. ಯಾವುದೇ ಧರ್ಮಗ್ರಂಥಗಳು ಆಯಾ ಕಾಲದ ಒತ್ತಡಗಳಿಗೆ, ತಿಳಿವಳಿಕೆಗೆ, ಅರಿವಿಗೆ, ಅನುಭವಕ್ಕೆ ಕೊಟ್ಟ ಅಭಿವ್ಯಕ್ತಿ ಮಾತ್ರ.

– ಪ್ರೊ॥ ಕೆ. ರಾಮದಾಸ್

# ರಾಮು - ವೈದಿಕ ರಾಜಕೀಯದ ತಂತ್ರ

ನಮ್ಮ ದೇಶ ವೈವಿಧ್ಯಮಯವಾದ ದೇಶ. ವಿವಿಧ ಭಾಷೆ, ಧರ್ಮ, ಸಂಸ್ಕೃತಿ, ಸಂಪ್ರದಾಯಗಳ ತವರು. ಈ ಬಹು ಸಂಸ್ಕೃತಿ ನಮ್ಮ ದೇಶದ ಜೀವಾಳ. ಇವುಗಳಿಗೆ ಪರಸ್ಪರ ಗೌರವ, ಸಮಾನತೆಯಿಂದ ಸ್ಪಂದಿಸಿದಾಗ ಮಾತ್ರ ಬಹು ಸಂಸ್ಕೃತಿ ಹರಿವ ನೀರಿನಂತೆ ಚಲನಶೀಲತೆಯನ್ನು ಪಡೆದುಕೊಳ್ಳುತ್ತದೆ.

ಆದರೆ ಸಂಘ ಪರಿವಾರದವರಿಗೆ ಈ ಬಹು ಸಂಸ್ಕೃತಿಯೇ ಒಂದು ದೊಡ್ಡ ಬಂಡೆಗಲ್ಲಾಗಿದೆ. ವೈವಿಧ್ಯಮಯವಾದ ಈ ದೇಶದ ಜನರನ್ನು ಒಂದು ಧಾರ್ಮಿಕ ಹಾಗು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಹಿಡಿದಿಡುವ ರಾಜಕೀಯ ಹುನ್ನಾರವನ್ನು ಎಂದಿನಿಂದಲೂ ಕಾಣಬಹುದಾಗಿದೆ. ಬಹು ಸಂಸ್ಕೃತಿಯ ವೈವಿಧ್ಯತೆಯನ್ನು ನಾಶಮಾಡಿ ವೈದಿಕ ಪರಂಪರೆಯೆಂಬ ಹಗ್ಗದಿಂದ ಮೂಟೆ ಕಟ್ಟುವ ಪ್ರಯತ್ನವನ್ನು ಸಂಘ ಪರಿವಾರದವರು ಮಾಡುತ್ತಿದ್ದಾರೆ. ಬ್ರಾಹ್ಮಣೇತರ ಜನರ, ಕೆಳವರ್ಗದ ಸ್ತ್ರೀಯರ ಜೀವನ ಕ್ರಮ, ಭಾಷೆ, ಸಂಸ್ಕೃತಿ, ಯಾವೂ ಇವರು ಪ್ರತಿಪಾದಿಸುವ ಹಿಂದುತ್ವ ಸಂಸ್ಕೃತಿಯ ಚೌಕಟ್ಟಿನಲ್ಲಿ ಸೇರುವುದಿಲ್ಲ. ಮೇಲು ಜಾತಿಯ ಜೀವನ ಕ್ರಮ, ಆಚಾರವಿಚಾರ, ರೀತಿ ರಿವಾಜು ಪದ್ಧತಿಗಳು, ಸಂಪ್ರದಾಯಗಳು ಅನಕರಿಸುವಂತಹ ಮಾದರಿಯಾಗಿವೆ, ಆದರ್ಶಪ್ರಾಯವಾಗಿವೆ. ಇವುಗಳ ಬಗ್ಗೆ ಒಂದು ರೀತಿಯ ಮೇಲರಿಮೆ ಸ್ಥಾಪಿತವಾಗಿದೆ. ಇತರ ಜನರ ಧಾರ್ಮಿಕ ಹಾಗೂ ಸಾಂಸ್ಕೃತಿಕ ಆಚರಣೆ, ಭಾಷೆ ರೀತಿ ರಿವಾಜುಗಳು ಕೀಳರಿಮೆಯಿಂದ ನರಳುವಂತೆ ಮಾಡಲಾಗಿದೆ. ಹಾಗಾಗಿ ಆದರ್ಶಪ್ರಾಯವಾದ, ಮಾದರಿಯಾದ ಮೇಲ್ಜಾತಿಯನ್ನು ಅನುಕರಿಸುವುದು ಒಂದು ಪ್ರಕ್ರಿಯೆಯಾಗಿದೆ. ಈ ಪ್ರಕ್ರಿಯೆಯಲ್ಲಿ ವೈವಿಧ್ಯತೆ ಸುಲಭವಾಗಿ ನಾಶದ ಹಾದಿಯನ್ನು ಹಿಡಿಯುತ್ತದೆ.

ನಮ್ಮ ಸಮಾಜವನ್ನು ಮೇಲ್ನೋಟಕ್ಕೆ ಹಿಂದು ಎನಿಸಿಕೊಳ್ಳುವಂತೆ ಮಾಡಲಾಗಿದೆ. ಹಿಂದೂ ಸಮಾಜದಲ್ಲಿ ಆಂತರಿಕ 'ಏಕತೆ' ಇದೆಯೆಂಬ ಭ್ರಮೆಯುನ್ನು ಹುಟ್ಟುಹಾಕಲಾಗಿದೆ. ಆದರೆ ನಮ್ಮ ಸಮಾಜದಲ್ಲಿ ಜಾತಿ ಕಲಹಗಳು, ವೈಶಮ್ಯಗಳು, ಬಹಿಷ್ಕಾರಗಳು, ಜಾತಿ ಕಾರಣದಿಂದ ಮಹಿಳೆಯನ್ನು ಬೆತ್ತಲೆಗೊಳಿಸುವುದು, ವರ್ಗ ಹಾಗೂ ಲಿಂಗಭೇದದ ತಾರತಮ್ಯಗಳಿಂದಾಗಿ ಸಂಘರ್ಷ, ಹೋರಾಟಗಳು ದಿನನಿತ್ಯವೂ ನಡೆಯುತ್ತಲೇ ಇವೆ. ಆದರೆ ನಮ್ಮ ಶತ್ರುಗಳ ಎದುರು ನಾವೆಲ್ಲ ಒಂದೇ ಎಂಬ ಪೋಸನ್ನು ಕೊಡುವಂತೆ ಪ್ರೇರೇಪಿಸಲಾಗುತ್ತಿದೆ.

ಈ ಏಕ ಸಂಸ್ಕೃತಿ ಯಾವುದು? ವೈದಿಕ ಪರಂಪರೆಯ ಹಿಂದುತ್ವದ ಮಾದರಿಯನ್ನು ಎಲ್ಲರೂ ಏಕೆ ಒಪ್ಪಿಕೊಳ್ಳಬೇಕು? ಏಕ ಸಂಸ್ಕೃತಿಯ ಪ್ರತಿಪಾದನೆ ಮೂಲಭೂತವಾದಕ್ಕೆ ಹಾದಿ ನೀಡುತ್ತದೆ. ವಿವಿಧ ಧಾರ್ಮಿಕ ಹಾಗೂ ಸಾಂಸ್ಕೃತಿಕ ರೀತಿ ರಿವಾಜುಗಳ ಅಸ್ತಿತ್ವವನ್ನು ನಾಶಪಡಿಸುತ್ತದೆ. ಇವುಗಳ ಮೇಲೆ ದಾಳಿ ನಡೆಸಿ ನಾಶಮಾಡುವ ಸಂಘ ಪರಿವಾರದ ತಂತ್ರ ಜನರಿಗೆ ಅರ್ಥವಾಗಬೇಕಾಗಿದೆ. ವಿವಿಧ ಜನಾಂಗದ ಜನರು ಸ್ಥಳೀಯವಾಗಿ ಆರಾಧಿಸುವ ದೇವರುಗಳನ್ನು ಮೂಲೆಗೊತ್ತಿ ರಾಮನನ್ನು ಏಕತೆಯ ಸಂಕೇತವಾಗಿ ಜನರ ಮನಸ್ಸಿನಲ್ಲಿ ಪ್ರತಿಷ್ಠಾಪಿಸುವುದರ ಹಿಂದಿರುವ ವೈದಿಕ ರಾಜಕೀಯ ತಂತ್ರವನ್ನು ಕುರಿತು ಜನರು ಗಂಭೀರವಾಗಿ ಆಲೋಚಿಸಬೇಕಾಗಿದೆ.

### ವರ್ಣಾಶ್ರಮ - ಜಾತಿ ವ್ಯವಸ್ಥೆ

ಏಕತೆಯ ಬಗ್ಗೆ ಜನಸಾಮಾನ್ಯರಲ್ಲಿ ವಿಶೇಷವಾಗಿ ಬ್ರಾಹ್ಮಣೇತರ ಸಮುದಾಯದ ಜನರಲ್ಲಿ ಒಂದು ರೀತಿಯ ಮಾನಸಿಕ ಭ್ರಮೆಯನ್ನು ಸೃಷ್ಟಿಮಾಡುವುದರ ಜೊತೆ ಜೊತೆಯಲ್ಲಿಯೇ ಜಾತಿ ಹಾಗೂ ಅಸ್ಪೃಶ್ಯತೆಯ ಆಚರಣೆಯನ್ನು ಉಳಿಸಿಕೊಂಡು ಹೋಗುವುದು ಸಂಘ ಪರಿವಾರದವರ ಆಲೋಚನೆಯಾಗಿದೆ.

ಮಹಾರಾಷ್ಟ್ರದಲ್ಲಿ ಬ್ರಾಹ್ಮಣ ವಿರೋಧಿ ಆಂದೋಲನವನ್ನೂ ಹತ್ತಿಕ್ಕುವ ಉದ್ದೇಶದಿಂದಲೇ ಹಿಂದುತ್ವದ ಪರಿಕಲ್ಪನೆಯನ್ನು ಹುಟ್ಟುಹಾಕಿರುವುದು ಐತಿಹಾಸಿಕ ಸತ್ಯವಾಗಿದೆ. ಸಂಘ ಪರಿವಾರದವರು ಎತ್ತಿ ಹಿಡಿಯುವ ಹಿಂದುತ್ವದ ಪರಿಕಲ್ಪನೆ ವೈದಿಕ ಧರ್ಮಎತ್ತಿ ಹಿಡಿಯುವ ವರ್ಣಾಶ್ರಮ ಪದ್ಧತಿಯನ್ನು ವಿರೋಧಿಸುವುದಿಲ್ಲ. ವರ್ಣಾಶ್ರಮದ ಆಧಾರದ ಮೇಲೆ



ರಚಿತವಾದ ಜಾತಿ ಕಲ್ಪನೆಯನ್ನು, ವಿಭಜನೆಯನ್ನು ವಿವಿಧ ಸ್ವರೂಪದಲ್ಲಿ ಉಳಿಸಿಕೊಳ್ಳುವ ಪ್ರಯತ್ನವನ್ನು ಮಾಡಲಾಗುತ್ತಿದೆ. ಶೋಷಣೆಯನ್ನು ಎತ್ತಿ ಹಿಡಿಯುವ ವರ್ಣಾಶ್ರಮದ ಬುದ್ದಿಗೆ ಬ್ರಾಹ್ಮಣರು, ಅಧಿಕಾರಕ್ಕೆ ಕ್ಷತ್ರಿಯರು, ಸಂಪತ್ತಿಗೆ ವೈಶ್ಯರು, ಶ್ರಮಕ್ಕೆ ಶೂದ್ರರು, ಎಂಬ ಈ ವಿಭಜನೆಯನ್ನು ಮುಂದುವರಿಸಿಕೊಂಡು ಹೋಗುವ ಚಾರಿತ್ರಿಕ ತಂತ್ರ ಕಣ್ಣಿಗೆ ರಾಚುವ ಸತ್ಯವಾಗಿದೆ. ಜಾತಿ ಹಾಗೂ ಅಸ್ಪೃಶ್ಯತೆಯ ಆಚರಣೆಯ ವಿಚಾರಗಳು ಬಂದಾಗಲೆಲ್ಲಾ ಸಂಘ ಪರಿವಾರದವರು ಅನುಕೂಲಕರ ಮೌನ ತಾಳುತ್ತಾರೆ. ಆದರೆ ತಮ್ಮ ನಂಬಿಕೆ ಹಾಗೂ ಆಲೋಚನೆಗಳನ್ನು ಜಾರಿಗೆ ತರುವಲ್ಲಿ ಮಾತ್ರ ಹಿಂದುಳಿದ ಜಾತಿ, ಪರಿಶಿಷ್ಟ ವರ್ಗ ಹಾಗೂ ಆದಿವಾಸಿಗಳನ್ನು ಮುಂಚೂಣಿಯಲ್ಲಿ ನಿಲ್ಲಿಸುತ್ತಾರೆ.

ಬ್ರಾಹ್ಮಣೇತರ ಸಮುದಾಯಗಳ ಬಗ್ಗೆ ಸಂಘ ಪರಿವಾರದವರಿಗಿದ್ದ ಅಸಹನೆಯನ್ನು ಮಂಡಲ್ ವರದಿಯ ಪ್ರತಿಭಟನೆಯಲ್ಲಿ ಸ್ಪಷ್ಟವಾಗಿ ಗಮನಿಸಬಹುದು. ದೆಹಲಿಯಲ್ಲಿ ನಡೆದ ರ‍್ಯಾಲಿಯೊಂದರಲ್ಲಿ ''ದೇಶಕ್ಕಾಗಿ ರಕ್ತ ಹರಿಸದವರು ಹಿಂದೂಗಳಲ್ಲ, ಭಂಗಿಗಳೆಂಬ 'ಘೋಷಣೆಯನ್ನು ಕೂಗುವ ಅಸ್ಪೃಶ್ಯರು ಹಿಂದೂಗಳಲ್ಲ' ಅಸ್ಪೃಶ್ಯರು ಹಿಂದೂಗಳಲ್ಲ ಎಂಬ ಅಂಶ ಆದರಲ್ಲಿ ಸ್ಪಷ್ಟವಾಗಿದೆ. ಬಿಹಾರದಲ್ಲಿ ಕ್ರೈಸ್ತ ಸನ್ಯಾಸಿನಿಯರ ಮೇಲೆ ಅತ್ಯಾಚಾರವನ್ನು ಎಸಗಿದವರು ಆದಿವಾಸಿ ಗಂಡಸರು. ಬಾಬ್ರಿ ಮಸೀದಿ ಕೆಡವಿ ಶಿಲಾನ್ಯಾಸ ಮಾಡುವ ಮುಂಚೂಣಿಯಲ್ಲಿ ಹರಿಜನ ಯುವಕನೊಬ್ಬ ಮುಂಚೂಣಿಯಲ್ಲಿದ್ದುದನ್ನು ನಾವು ಗಮನಿಸಬೇಕಾಗುತ್ತದೆ.

ನಮ್ಮ ದೇಶದಲ್ಲಿ ನಡೆದ ಹಾಗೂ ನಡೆಯುತ್ತಿರುವ ವಿವಿಧ ಕೋಮುಗಲಭೆಗಳ ಹಿನ್ನಲೆಯನ್ನು ಗಮನಿಸಿದಾಗ ಅಲ್ಪ ಸಂಖ್ಯಾತರ ವಿರುದ್ಧ ಹಿಂದುಳಿದ ಜಾತಿ, ವರ್ಗ, ಪರಿಶಿಷ್ಟ ಜನಾಂಗ, ಜನರನ್ನು ಎತ್ತಿ ಕಟ್ಟಿರುವುದು ಐತಿಹಾಸಿಕ ಸತ್ಯವಾಗಿದೆ. ಉತ್ತರ ಪ್ರದೇಶದಲ್ಲಿ ಹಿಂದುಳಿದ ವಾಲ್ಮೀಕಿ ಸಮುದಾಯವನ್ನು ಹಿಂದೂಕರಣಗೊಳಿಸಿ ರಾಜಕೀಯ ದಾಳಗಳನ್ನಾಗಿ ಮಾಡಿಕೊಳ್ಳುವುದು ಸಂಘ ಪರಿವಾರದವರ ಉದ್ದೇಶವಾಗಿದೆ.

ಹರಿಜನರಿಗೆ, ಗಿರಿಜನರಿಗೆ, ಆದಿವಾಸಿಗಳಿಗೆ, ಪ್ರಧಾನ ಸಂಸ್ಕೃತಿಯನ್ನು ಕಲಿಸಿಕೊಡುವುದು ತುರ್ತಾಗಿ ಆಗಬೇಕಾದ ಕೆಲಸವೆಂದು ಪುಸ್ತಕವೊಂದರಲ್ಲಿ ಅಧಿಕೃತವಾಗಿ ದಾಖಲಿಸಲಾಗಿದೆ.

## ಪಿತೃ ಪ್ರಧಾನ ಮೌಲ್ಯ

ಹಿಂದುತ್ವದ ಪರಿಕಲ್ಪನೆಯನ್ನು ಎತ್ತಿ ಹಿಡಿಯುವ ಸಂಘ ಪರಿವಾರದವರು 'ಮನುಸ್ಮೃತಿ' ಯ ಮೂಲಕ

ಮಹಿಳೆಯನ್ನು ನೋಡುತ್ತಾರೆ. 'ನಸ್ತ್ರೀ ಸ್ವಾತಂತ್ರ್ಯ ಅರ್ಹತಿ' . ಜೀವನ ಪರ್ಯಂತ ಸ್ತ್ರೀ ತಂದೆಯ, ಗಂಡನ, ಮಗನ ಆಶ್ರಯದಲ್ಲಿ ಇರಬೇಕೆಂದು ಆದೇಶಿಸುವ ಮನುಸ್ಮೃತಿ ಪುರುಷ ಪ್ರಧಾನತೆಯ ಮೂಲಕ ಸ್ತ್ರೀಯರನ್ನು ಹದ್ದುಬಸ್ತಿನಲ್ಲಿಡಬೇಕೆಂದು ಹೇಳುತ್ತದೆ. ವೈದಿಕ ಪರಂಪರೆಯ ಈ ಆಲೋಚನೆ ಸ್ತ್ರೀಯರ ಸಂಪೂರ್ಣ ಅಸ್ತಿತ್ವವನ್ನು ಕಡೆಗಣಿಸಿದೆ. ಈ ಮನಸ್ಥಿತಿಯಲ್ಲಿ ನಂಬಿಕೆಯುಳ್ಳ ಸಂಘ ಪರಿವಾರದವರು ಮಹಿಳೆಯರ ಸ್ವತಂತ್ರ್ಯ, ಸಮಾನತೆಯ ಪ್ರಶ್ನೆಗಳನ್ನು ಹೇಗೆ ತುಳಿದು ಹಾಕುತ್ತಿದ್ದಾರೆಂಬುದಕ್ಕೆ ಹಲವಾರು ನಿದರ್ಶನಗಳು ನಮ್ಮ ಮುಂದಿವೆ, ಹಿಂದೂ ಪರಂಪರೆಯ ಚೌಕಟ್ಟಿನಲ್ಲಿಯೇ ಸ್ತ್ರೀಯರು ಬದುಕಬೇಕಾಗಿದೆ. ಇದು ಪಿತೃ ಪ್ರಧಾನತೆ, ಪುರುಷ ಪ್ರಧಾನತೆಯನ್ನು ಎತ್ತಿ ಹಿಡಿಯುತ್ತದೆ. ವರ್ಣಾಶ್ರಮದಲ್ಲಿನ ಶ್ರೇಣೀಕೃತ ಸಮಾಜವನ್ನು ಅಧಿಕೃತಗೊಳಿಸುವುದರ ಜೊತೆಗೆ ಕುಟುಂಬದ ಚೌಕಟ್ಟಿನಲ್ಲಿ ಹಾಗೂ ಸಮಾಜದಲ್ಲಿ ಸ್ತ್ರೀಯು ಪುರುಷನ ತೀರ್ಮಾನಕ್ಕೆ ಬದ್ಧವಾಗಿರಬೇಕೆಂದು ಹೇಳುವುದರ ಮೂಲಕ ಕುಟುಂಬದೊಳಗೆ ಅವಳ ಮೇಲೆ ನಡೆಯುವ ಹಿಂಸೆ, ದೌರ್ಜನ್ಯಕ್ಕೆ ಸಮ್ಮತಿಯ ಮುದ್ರೆಯನ್ನು ಒತ್ತುತ್ತಾರೆ. 1925ರಲ್ಲಿ ಪ್ರಾರಂಭವಾದ ಆರ್.ಎಸ್.ಎಸ್. ನ ಹಿಂದೂ ಆಲೋಚನೆ ಹೇಗೆ ಪಿತೃ ಪ್ರಧಾನವಾಗಿದೆಯೆಂಬುದನ್ನು ನೋಡಬಹುದು. ಸಾವರ್‌ಕರ್ ಪ್ರಕಾರ ಹಿಂದು ಎಂದರೆ ಸೋತು ಬಸವಳಿದು ನಿರ್ವೀರ್ಯನಾಗಿರುವ ಒಬ್ಬ ಹೆಣ್ಣಿಗ. ಆತ ಮರಳಿ ತನ್ನ ಕ್ಷಾತ್ರ ತೇಜಸ್ಸನ್ನು ಪಡೆದು ಹೊಸ ರಾಷ್ಟ್ರವನ್ನು ಕಟ್ಟಬೇಕು ಎನ್ನುವಲ್ಲಿ ಬಳಸಿರುವ ಪದಗಳು ವೀರ್ಯ, ಕ್ಷಾತ್ರ ತೇಜಸ್ಸು, ಬಲ, ಮುಂತಾದವು ಗಂಡು ಮೌಲ್ಯಗಳ ಸೂಚಕ ಪದಗಳಾಗಿವೆ.

ಯಾವುದೇ ಮೂಲಭೂತವಾದ ತನ್ನ ಅಸ್ತಿತ್ವವನ್ನು ಕಾಯ್ದುಕೊಳ್ಳುವುದು ಸ್ತ್ರೀಯರ ಮೇಲೆ ನಿರ್ಬಂಧಗಳನ್ನು ಹೇರುವುದರ ಮೂಲಕ. ಎಲ್ಲಾ ದೇಶಗಳ ಚರಿತ್ರೆಯನ್ನು ಗಮನಿಸಿದಾಗ ಈ ಅಂಶವನ್ನು ಕಾಣಬಹುದು. ಮೂಲಭೂತವಾದದೊಂದಿಗೆ ರಾಜಕೀಯ ಅಧಿಕಾರ ಬೆರೆತಾಗ ಸ್ತ್ರೀಯರು ಧರ್ಮಗಳ ಆಸ್ತಿಯೆಂಬಷ್ಟು ಕ್ರೂರವಾಗಿ, ಬರ್ಬರವಾಗಿ, ಅವಮಾನುಷವಾಗಿ ನಡೆಸಿಕೊಳ್ಳುತ್ತಿರುವ ನಿದರ್ಶನಗಳು ನಮ್ಮೆದುರಿಗಿವೆ. ಭಾರತದಲ್ಲಿ ಷಾ ಬಾನು ಪ್ರಕರಣ, ಸತಿ ಪದ್ಧತಿಯನ್ನು ಸಮರ್ಥಿಸಿದ ರೂಪಾ ಕನ್ವರ್ ಘಟನೆ, ಫೈಯರ್ ಚಿತ್ರದ ನಿಷೇಧ, ವಾಟರ್ ಚಿತ್ರದ ಹಗರಣ, ಕ್ರೈಸ್ತ ಸನ್ಯಾಸಿನಿಯರ ಮೇಲೆ ನಡೆದ ಅತ್ಯಾಚಾರ, ಗುಜರಾತ್‌ನಲ್ಲಿ ಅಲ್ಪಸಂಖ್ಯಾತ ಮಹಿಳೆಯರ ಮೇಲೆ ನಡೆದ ದೌರ್ಜನ್ಯ, ಕೋಮುವಾದಿಗಳ ಪುರುಷ ಪ್ರಧಾನ ವಿಕೃತಿಯ ಸಂಕೇತಗಳಾಗಿವೆ.

ಸಂಘ ಪರಿವಾರದವರ ಪುರುಷ ಪ್ರಧಾನ ಮೌಲ್ಯಗಳನ್ನು ಮಹಿಳಾ ಸಂಘಟನೆಗಳು ವಿರೋಧಿಸುತ್ತಾ ಬಂದಿವೆ. ಸ್ತ್ರೀಯರ ಸ್ವಾತಂತ್ರ್ಯ, ಸಮಾನತೆ, ಘನತೆಯನ್ನು ಎತ್ತಿ ಹಿಡಿಯುವ ಹೋರಾಟಗಳನ್ನು, ಆಲೋಚನೆಗಳನ್ನು ಪಾಶ್ಚಾತ್ಯ ಎಂದು ಆರೋಪಿಸುವ ಹುನ್ನಾರವನ್ನು ಸಂಘ ಪರಿವಾರದವರು ಮಾಡುತ್ತಲೇ ಬಂದಿದ್ದಾರೆ. ಹಿಂದುತ್ವದ ಪರಿಕಲ್ಪನೆಯನ್ನು ಎತ್ತಿ ಹಿಡಿಯುವ ಭ್ರಮೆಯಲ್ಲಿ ಹಿಂದೂ ಕುಟುಂಬದೊಳಗೆ ಸ್ತ್ರೀಯರ ಮೇಲೆ ನಡೆಯುವ ಅಮಾನುಷ ಕ್ರೌರ್ಯಕ್ಕೆ ಪರವಾನಗಿ ನೀಡುತ್ತಾರೆ. ಗುಜರಾತಿನ ಅಲ್ಪಸಂಖ್ಯಾತ ಸಮುದಾಯದ ಸ್ತ್ರೀಯರ ಮೇಲೆ ನಡೆದ ಅಮಾನುಷ, ಬರ್ಬರ, ಹತ್ಯಾಕಾಂಡವನ್ನು ಯಾವ ಧರ್ಮದ ಮೂಲಸತ್ವ ಸಮರ್ಥಿಸುತ್ತದೆ?

ಆತಂಕಕಾರಿಯಾದ ಬೆಳವಣಿಗೆಯೆಂದರೆ ಸಂಘ ಪರಿವಾರದವರ ಕಾರ್ಯಾಚರಣೆಯಲ್ಲಿ ಮಹಿಳೆಯರನ್ನು ಮುಂಚೂಣಿಯಲ್ಲಿ ನಿಲ್ಲಿಸುವುದು. ಇದರ ರಾಜಕೀಯ ಆಲೋಚನೆಗಳಲ್ಲಿ ಸ್ತ್ರೀಯರು ಮುಂಚೂಣಿಯಲ್ಲಿದ್ದು, ಹಿಂಸಾತ್ಮಕ ಮಾರ್ಗದಲ್ಲಿ ಪುರುಷ ಪ್ರಧಾನ ಕಾರ್ಯತಂತ್ರಗಳನ್ನು ಅಳವಡಿಸಿಕೊಳ್ಳುತ್ತಿರುವುದು ಅಮಾನವೀಯವಾದ ಬೆಳವಣಿಗೆ.

### ಫ್ಯಾಸಿಸ್ಟ್ ಧೋರಣೆ

ನಮ್ಮ ದೇಶ ಪ್ರಜಾಪ್ರಭುತ್ವ ದೇಶ. ಸಂವಿಧಾನದ ಮೂಲಕ ಸಮಾನತೆಯ ಆಧಾರದ ಮೇಲೆ ನಾಗರೀಕರಿಗೆ

ಹಕ್ಕು ಭಾಧ್ಯತೆಗಳನ್ನು ನೀಡಲಾಗಿದೆ. ಜನರ ಹಕ್ಕು ಭಾದ್ಯತೆಗಳು ಉಲ್ಲಂಘನೆಯಾದಾಗ ರಕ್ಷಣೆಗಾಗಿ ನ್ಯಾಯಾಲಯಗಳಿವೆ. ಈ ವ್ಯವಸ್ಥೆಗಳು ಎಷ್ಟು ಸಮರ್ಥವಾಗಿ, ನ್ಯಾಯೋಚಿತವಾದ ಕೆಲಸ ಮಾಡುತ್ತಿವೆ ಎಂಬ ಪ್ರಶ್ನೆ ಬೇರೆ. ಇಂತಹ ಒಂದು ರಾಜಕೀಯ ವ್ಯವಸ್ಥೆ ನಮ್ಮ ಮೂಲಭೂತ ಹಕ್ಕು ಬಾಧ್ಯತೆಗಳನ್ನು ರಕ್ಷಿಸುತ್ತದೆಯೆಂಬುದು ಮುಖ್ಯ ಅಂಶ.

ಆದರೆ ಸಂಘ ಪರಿವಾರದವರಿಗೆ ಇದರಲ್ಲಿ ನಂಬಿಕೆ ಇಲ್ಲ. ಇವರು ಪ್ರಜಾ ಪ್ರಭುತ್ವದ ಆರಾಧಕರಲ್ಲ. ವೈಯಕ್ತಿಕ ಹಂತದಲ್ಲಿ ಹಾಗೂ ರಾಜಕೀಯ ಉದ್ದೇಶವನ್ನು ಇಟ್ಟುಕೊಂಡು ಹಿಂದುತ್ವದ ನಂಬಿಕೆಯನ್ನು ಮೈಗೂಡಿಸಿಕೊಂಡ ಪ್ರತಿಯೊಬ್ಬನೂ ಫ್ಯಾಸಿಸ್ಟ್ ಧೋರಣೆಯ ಪ್ರತಿಪಾದಕನಾಗಿದ್ದಾನೆ. ಇದು ಕೇವಲ ನಡತೆಯ ಪ್ರಶ್ನೆಯಲ್ಲ. ವೈಯಕ್ತಿಕ ಹಾಗೂ ರಾಜಕೀಯ ಹಂತದಲ್ಲಿ ಹಿಂದುತ್ವದ ಫ್ಯಾಸಿಸ್ಟ್ ಧೋರಣೆಯನ್ನು ಮೈಗೂಡಿಸಿಕೊಂಡಿರುವುದಕ್ಕೆ ಐತಿಹಾಸಿಕ ಹಿನ್ನಲೆಯಿದೆ.

ಜರ್ಮನಿಯಲ್ಲಿ ಹಿಟ್ಲರ್, ಇಟಲಿಯಲ್ಲಿ ಮುಸಲೋನಿ ನಿರಂಕುಶಾಧಿಕಾರಿಗಳಾಗಿ ಬೆಳೆಯುತ್ತಿದ್ದ ಸಂದರ್ಭದಲ್ಲಿ ಭಾರತದಲ್ಲಿ ಹಿಂದುತ್ವದ ಬೀಜಗಳು ಬೆಳೆಯ ತೊಡಗಿದವು. ಜರ್ಮನಿಯಲ್ಲಿ ಹಿಟ್ಲರ್ ನಾಜಿಗಳ ಶ್ರೇಷ್ಠತೆಯನ್ನು ಎತ್ತಿ ಹಿಡಿಯಲು ಯಹೂದ್ಯರನ್ನು ಗ್ಯಾಸ್ ಛೇಂಬರ್‌ನಲ್ಲಿ ಹಾಕಿ ಸುಡುವಷ್ಟು ಅಮಾನುಷನಾಗಿದ್ದ. ಅವನ ಈ ಬರ್ಬರ ಕೃತ್ಯವನ್ನು ತನ್ನ ದೇಶದ ಜನರು ಒಪ್ಪಿಕೊಳ್ಳುವಂತಹ ಮಿಥ್‌ಗಳನ್ನು ಸೃಷ್ಟಿಸಿದ್ದ. ಇದು ಒಂದು ರೀತಿಯ ಮಾನಸಿಕ ತಯಾರಿ.

'ಜರ್ಮನಿ ಇಟ್ಟ ಹೆಜ್ಜೆಯಿಂದ ಹಿಂದುಸ್ಥಾನ ಪಾಠ ಕಲಿಯಬೇಕಾಗಿದೆ. ಅಂತಹುದೇ ಹೆಜ್ಜೆಯಿಡುವ ಮೂಲಕ ಲಾಭ ಹೊಂದ ಬೇಕಿದೆ' ಇದು ಸಂಘ ಪರಿವಾರದವರ ಆದರ್ಶವಾಗಿದೆ. ಅಲ್ಪ ಸಂಖ್ಯಾತರು ಬಹು ಸಂಖ್ಯಾತರಿಗೆ ವಿದೇಯರಾಗಿರಬೇಕೆಂಬುದೇ ಇದರ ಸಾರಾಂಶ. ಜಾತ್ಯಾತೀತತೆಯನ್ನು ರಕ್ಷಿಸುವ, ಭಾರತೀಯ ಸಂವಿಧಾನಕ್ಕೆ ಸಂಪೂರ್ಣ ವಿರೋಧಿಯಾದ ನಿಲುವನ್ನು ಸಂಘ ಪರಿವಾರದವರು ಹೊಂದಿದ್ದಾರೆ.

ಇಂತಹ ಆಕ್ರಮಣಕಾರಿ ಫ್ಯಾಸಿಸ್ಟ್ ಧೋರಣೆಯಿಂದಾಗಿ ಪ್ರಜಾಪ್ರಭುತ್ವ ಅರ್ಥವನ್ನು ಕಳೆದುಕೊಂಡು ಅಧಿಕಾರವಿರುವವರು ಹಿಡಿದುಕೊಂಡ ಬೆದರು ಗೊಂಬೆಯಾಗುತ್ತದೆ.

ನಿರಂಕುಶ ಅಧಿಕಾರ ಹಾಗೂ ಮನಸ್ಸು ಪ್ರಜಾಪ್ರಭುತ್ವ ಪರಿಕಲ್ಪನೆಗೆ ವಿರೋಧಿಯಾದುದು. ಇದು ಜನಸಾಮಾನ್ಯರ, ಅಲ್ಪಸಂಖ್ಯಾತರ ಸ್ವಾತಂತ್ರ್ಯ, ಸಮಾನತೆ, ಹಕ್ಕು ಭಾದ್ಯತೆಗಳನ್ನು ಕಾಲಿನಲ್ಲಿ ಹೊಸಕಿ ಹಾಕುತ್ತದೆ. ಸಂಘ ಪರಿವಾರದವರು ಯುವಕರಿಗೆ ನೀಡುವ ತರಬೇತಿ, ಅವರು ಬಳಸುವ ಆಯುಧಗಳು ಅವರ ಧೋರಣೆಯ ಸಂಕೇತಗಳು ಇತ್ತೀಚೆಗೆ ಸಂಘ ಪರಿವಾರದ ವಕ್ತಾರ ''ಯುವಕರು ಇನ್ನಷ್ಟು ಆಕ್ರಮಣಶೀಲರಾಗ ಬೇಕೆಂದು'' ಕರೆ ನೀಡಿರುವುದು ಈ ಮೇಲಿನ ವಿಚಾರಗಳನ್ನು ಬಲಪಡಿಸುತ್ತದೆ. ಈ ಹಿನ್ನಲೆಯಲ್ಲಿ ರೂಪುಗೊಂಡ ಮನಸ್ಸಿನ ಯುವಕರು ಧರ್ಮದ ಹೆಸರಿನಲ್ಲಿ ಪೈಶಾಚಿಕ ಕೃತ್ಯ ನಡೆಸಿ, ಧರ್ಮದ ಹೆಸರಿನಲ್ಲಿ ಸಮರ್ಥಿಸಬಹುದು. ಸಂಘ ಪರಿವಾರದವರ ಪ್ರತಿಭಟನೆ ಯಾವತ್ತೂ ಪ್ರಜಾತಂತ್ರ ಹಾದಿಯಲ್ಲಿ ನಡೆಯುವುದಿಲ್ಲ. ಇದಕ್ಕೆ ಉದಾಹರಣೆಯಾಗಿ ಗುಜರಾತ್ ಹತ್ಯಾಕಾಂಡ ನಮ್ಮ ಕಣ್ಣು ಮುಂದಿದೆ.

## ರಾಷ್ಟ್ರಪ್ರೇಮ

ರಾಷ್ಟ್ರಪ್ರೇಮ, ದೇಶ ಭಕ್ತಿ, ಮುಂತಾದವುಗಳು ಕೇವಲ ತಮ್ಮ ಸೊತ್ತೆಂದು ಸಂಘ ಪರಿವಾರದವರು ಭಾವಿಸುತ್ತಾರೆ. ಆದರೆ ನಮ್ಮ ದೇಶದ ಸ್ವಾತಂತ್ರ ಹೋರಾಟದಲ್ಲಿ ಇವರ ಪಾತ್ರವನ್ನು ಗಮನಿಸಿದಾಗ ಇವರ ದೇಶ ಭಕ್ತಿಯ ಬಣ್ಣ ಬಯಲಾಗುತ್ತದೆ.

ನಮ್ಮ ದೇಶದ ಸ್ವಾತಂತ್ರ ಹೋರಾಟದ ಯಾವ ಚಳುವಳಿಯಲ್ಲಿ ಆರ್.ಎಸ್.ಎಸ್. ಆಗಲಿ ಅದರ ನಾಯಕರಾಗಲಿ, ಸಂಪೂರ್ಣವಾಗಿ ಭಾಗವಹಿಸಿದ

ವಿವರಗಳು ನಮಗೆ ಸಿಗುತ್ತವೆ ? ಸೈಮನ್ ಆಯೋಗದ ವಿರುದ್ಧ ನಡೆದ ಚಳುವಳಿ, ದಂಡಿ ಮಾರ್ಚ್, ಅಸಹಕಾರ ಚಳವಳಿಯಲ್ಲಿ ಭಾಗವಹಿಸಲಿಲ್ಲ. 1930, ಜನವರಿ 26 ತನ್ನ ಸ್ವಾತಂತ್ರ ದಿನವನ್ನಾಗಿ ಆಚರಿಸಬೇಕೆಂದು ಕಾಂಗ್ರೆಸ್ ನಿರ್ಣಯಿಸಿತ್ತು. ಪ್ರತಿವರ್ಷ ಪೋಲೀಸ್ ದೌರ್ಜನ್ಯವನ್ನು ವಿರೋಧಿಸಿಯೂ ಕಾಂಗ್ರೆಸ್ ಈ ದಿನವನ್ನು ಸ್ವಾತಂತ್ರದ ದಿನವೆಂದು ಆಚರಿಸುತ್ತಿತ್ತು. ಆದರೆ ಆರ್.ಎಸ್.ಎಸ್. ಪ್ರಾರಂಭದ ಒಂದು ದಿನ ಬಿಟ್ಟು ನಂತರದ ವರ್ಷಗಳಲ್ಲಿ ಆಚರಿಸಲೇ ಇಲ್ಲ. ಪ್ರಾರಂಭದಲ್ಲಿ ಅದು ಕೇಸರಿ ಬಾವುಟವನ್ನು ಪೂಜಿಸಿ ಆಚರಿಸಲಾಗಿತ್ತು. 1942 ಭಾರತ ಬಿಟ್ಟು ತೊಲಗಿ, ಆಜಾದ್ ಹಿಂದ್ ಫೌಜ್, ಮುಂಬಯಿ ನೌಕಾ ದಳ ದಂಗೆ, ಹೀಗೆ ಎಲ್ಲ ಸಂದರ್ಭದಲ್ಲೂ ಇದರ ನಾಯಕರು ದೂರ ಉಳಿದಿದ್ದರು. ಭಾರತ ಬಿಟ್ಟು ತೊಲಗಿ ಆಂದೋಲನದ ಕಾಲದಲ್ಲಿ ಬ್ರಿಟಿಷ್ ಸೇವೆಯಲ್ಲಿದ್ದ ಹಿಂದೂಗಳಿಗೆ ಕೆಲಸಕ್ಕೆ ರಾಜೀನಾಮೆ ಕೊಡಬೇಡಿ, ರಾಜಕೀಯವನ್ನು ಹಿಂದೂಕರಣಗೊಳಿಸಿ, ಹಿಂದೂ ಮತವನ್ನು ಮಿಲಿಟರೀಕರಣಗೊಳಿಸಿ, ಎಂದು ಕರೆ ನೀಡಲಾಗಿತ್ತು. ಸ್ವಾತಂತ್ರ ಚಳುವಳಿಗಾಗಿ ಕೆಲಸ ಬಿಡದೆ ಅವರು ಮುಸ್ಲಿಂ ಸಮುದಾಯದ ವಿರುದ್ಧ ಹೋರಾಡುವಂತೆ ಕರೆ ನೀಡಲಾಗಿತ್ತು.

ಆರ್.ಎಸ್.ಎಸ್. ಬ್ರಿಟೀಷರ ವಿರುದ್ಧ ತನ್ನ ಪ್ರತಿಭಟನೆಯನ್ನು ತೋರಿಸಿರಲಿಲ್ಲ. ಸ್ವಾತಂತ್ರ ಚಳುವಳಿಯ ಯಾವುದೇ ಚಳುವಳಿಯಲ್ಲಿ ನಾಯಕರಾಗಲೀ, ಕಾರ್ಯಕರ್ತರಾಗಲಿ ಭಾಗವಹಿಸದಿರುವುದು ಚಾರಿತ್ರಿಕವಾಗಿ ದಾಖಲಾಗಿದೆ. ಬ್ರಿಟಿಷರ ವಿರುದ್ಧ ಧ್ವನಿ ಎತ್ತದ ಆರ್.ಎಸ್.ಎಸ್ ಚಟುವಟಿಕೆಯ ಮೇಲೆ ಬ್ರಿಟಿಷ್ ಸರ್ಕಾರದವರು ಯಾವುದೇ ನಿಷೇಧವನ್ನು ಹೇರಲಿಲ್ಲ. ಆರ್.ಎಸ್.ಎಸ್ ನ ಗರಡಿಯಲ್ಲಿ ಪಳಗಿದ ನಾಥುರಾಮ್ ಗೋಡ್ಸೆ ಗಾಂಧೀಜಿಯವರನ್ನು ಕೊಂದ ಮೇಲೆ ಭಾರತ ಸರ್ಕಾರ ಆರ್.ಎಸ್.ಎಸ್.ನ ಚಟುವಟಿಕೆಗಳನ್ನು ಹಾಗೂ ಆರ್.ಎಸ್.ಎಸ್.ನ್ನು ಕಾನೂನು ಬಾಹಿರ ಸಂಘಟನೆ ಎಂದು ನಿಷೇಧಿಸಿತ್ತು.

ಇಂದು ಸಂಘ ಪರಿವಾರದವರು ದೇಶಭಕ್ತಿ, ರಾಷ್ಟ್ರಪ್ರೇಮದ ಬಗ್ಗೆ ಮಾತನಾಡಿದಾಗ ಈ ಮೇಲಿನ ವಿಚಾರವನ್ನು ನಾವು ಗಮನಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಸಾಮ್ರಾಜ್ಯಶಾಹಿ ಬ್ರಿಟಿಷ್ ಸರ್ಕಾರವನ್ನು ಮನವೊಲಿಸಿಕೊಳ್ಳಲು ಇವರು ಹೂಡಿದ ತಂತ್ರ ರಾಷ್ಟ್ರಪ್ರೇಮ. ದೇಶಭಕ್ತಿಯ ಕುರುಹೇ? ಹಿಂದೂವಲ್ಲದ, ಸಮುದಾಯವನ್ನು, ಅವರ ರಾಷ್ಟ್ರಪ್ರೇಮ, ದೇಶಭಕ್ತಿಯನ್ನು ಪ್ರಶ್ನಿಸುವ ನಾಯಕರು ಮೊದಲು ತಮ್ಮನ್ನು ತಾವು ನೋಡಿಕೊಳ್ಳಬೇಕಾಗಿದೆ. ಮುಸ್ಲಿಂ ಸಮುದಾಯ, ಕ್ರೈಸ್ತ ಸಮುದಾಯವನ್ನು ದೇಶದ್ರೋಹಿಗಳು ಎಂಬ ಮಿಥ್ ಅನ್ನು ಸೃಷ್ಟಿಸುವ ಕುತಂತ್ರದ ಹಿಂದಿರುವ ರಾಜಕೀಯವನ್ನು ಇಂದು ನಾವು ಅರ್ಥ ಮಾಡಿಕೊಳ್ಳಬೇಕಾಗಿದೆ.

## ಕೋಮು ಭಾವನೆ

1920ರ ನಂತರ ಭಾರತದಲ್ಲಿ ಕೋಮುವಾದಿ ಭಾವನೆಯು ಬಲಗೊಳ್ಳುತ್ತಾ ಬಂದಿದೆ. ಹಿಂದೂ ಸಮುದಾಯದಲ್ಲಿರುವ ಸಾಮಾಜಿಕ ಅಸಮಾನತೆಯನ್ನು ಮುಚ್ಚಿ ಹಾಕುವುದರ ಜೊತೆಗೆ ಈ ಸಮುದಾಯದೊಳಗಡೆ ಇರುವ ಬಹು ಮುಖೀ ಸಂಸ್ಕೃತಿಯನ್ನು ನಾಶಮಾಡುವ ಹಿಂದುತ್ವದ ಫ್ಯಾಸಿಸ್ಟ್ ಧೋರಣೆಯನ್ನು, ಬೆಳಸುವಲ್ಲಿ ಸಂಘಪರಿವಾರದವರು ಯಶಸ್ವಿಯಾಗಿದ್ದಾರೆ. ನಮ್ಮ ಸಮಾಜವನ್ನು ಕೆಲವು ಸರಳ ಮಿಥ್‌ಗಳನ್ನು, ಭ್ರಮೆಗಳನ್ನು ಸೃಷ್ಟಿಮಾಡುವುದರ ಮೂಲಕ ಹಿಂದು, ಹಿಂದುವಲ್ಲದ ಧ್ರುವೀಕರಣಕ್ಕೆ ಅಗತ್ಯವಾಗಿ ರಾಜಕೀಯ ಹಾಗೂ ಧಾರ್ಮಿಕ ತಂತ್ರಗಳನ್ನು ಹೆಣೆಯುವುದರಲ್ಲಿ ಈ ಶಕ್ತಿಗಳು ಯಶಸ್ವಿಯಾಗಿವೆ.

ಧರ್ಮ ನಿರಪೇಕ್ಷಿತ ರಾಜಕೀಯ ಪರಿಕಲ್ಪನೆಯನ್ನು ಬುಡಸಹಿತ ಕಿತ್ತು ಹಾಕುವ ಹುನ್ನಾರವನ್ನು ಸಂಘಪರಿವಾರದ ಕಾರ್ಯತಂತ್ರದಲ್ಲಿ ಕಾಣಬಹುದು. ಈ ಬೆಳವಣಿಗೆಯನ್ನು ಕೇವಲ ಭಾರತದಲ್ಲಿ ಮಾತ್ರವಲ್ಲ, ಜಗತ್ತಿನ ಇತರ ದೇಶಗಳಲ್ಲಿಯೂ ಸಹ ಕಾಣಬಹುದು. ಈ ಪ್ರಕ್ರಿಯೆಯನ್ನು

ಎರಡು ಹಂತದಲ್ಲಿ ನಾವು ಕಾಣಬಹುದು, ಒಂದು ಸತತವಾಗಿ ಕೋಮು ಗಲಭೆ, ಕೋಮು ವೈಷಮ್ಯಗಳನ್ನು ಹುಟ್ಟುಹಾಕುವುದು, ಪ್ರೇರೇಪಿಸುವುದು, ಪ್ರಚೋದನೆ ನೀಡುವುದು ಹಾಗೂ ಕೋಮು ವೈಷಮ್ಯದ ಭಾವನೆಯನ್ನು ಜನಸಾಮಾನ್ಯರಲ್ಲಿ ಬಿತ್ತುತ್ತಾ ಹೋಗುವುದು. ಈ ಎರಡು ಕಾರ್ಯತಂತ್ರವನ್ನು ಸಂಘ ಪರಿವಾರದವರು ನಿರಂತರವಾಗಿ ಬಿತ್ತುತ್ತಾ ಹೋಗುವುದು. ಈ ಎರಡು ಕಾರ್ಯತಂತ್ರವನ್ನು ಸಂಘ ಪರಿವಾರದವರು ನಿರಂತರವಾಗಿ ಮಾಡಿಕೊಂಡು ಬರುತ್ತಿದ್ದಾರೆ. ಈ ಕಾರ್ಯತಂತ್ರ ಸಾಧ್ಯವಾಗುತ್ತಿರುವುದು ಬಹು ಸಂಖ್ಯಾತ ಜನಾಂಗ, ತನ್ನ ವೈವಿಧ್ಯತೆಯನ್ನು ಮರೆತು, ವೈದಿಕ ಪರಂಪರೆಯ ಪರಿಕಲ್ಪನೆಗಳನ್ನು ಆದರ್ಶ ಮಾದರಿ ಎಂದು ಪರಿಗಣಿಸುತ್ತಿರುವುದರಿಂದ ಈ ಪ್ರಕ್ರಿಯೆ ಸುಲಭ ಸಾಧ್ಯವಾಗಿದೆ. ನಮ್ಮ ದೇಶದ ಅನೇಕ ಧರ್ಮಗಳಾದ, ಬೌದ್ಧ ಧರ್ಮ, ಜೈನ್ ಧರ್ಮಗಳೂ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ಹಿಂದುತ್ವದ ವ್ಯಾಪ್ತಿಯಲ್ಲೇ ಸೇರಿಬಿಟ್ಟಿರುವುದರಿಂದ ಈ ಧರ್ಮಗಳು ಹಿಂದುತ್ವದ ಕಲ್ಪನೆಗೆ ಸವಾಲೆಸೆದಂತಾಗಿದೆ. ಬೌದ್ಧ ಹಾಗೂ ಜೈನ ಧರ್ಮಗಳ ಮೇಲೂ ಸಹ ಆಕ್ರಮಣ ಮಾಡಲಾಗಿತ್ತು. ಈ ಧರ್ಮಗಳು ಹಿಂದೂ ಅರ್ಥಶಾಸ್ತ್ರ ಹಾಗೂ ತತ್ವ ಶಾಸ್ತ್ರಗಳಿಗೆ ಗಣನೀಯ ಕೊಡುಗೆ ನೀಡಿಲ್ಲ ವೆಂದು ವಾದಿಸಲಾಗಿತ್ತು.

ಹಿಂದುತ್ವದ ಏಕತೆಯನ್ನು ಉಳಿಸಿಕೊಳ್ಳಲು ಮುಸ್ಲಿಂ ಹಾಗೂ ಕ್ರೈಸ್ತ ಸಮುದಾಯಗಳನ್ನು ದೇಶ ದ್ರೋಹಿ, ರಾಷ್ಟ್ರ ನಿಷ್ಠೆಯಿಲ್ಲದವರೆಂದು ಬಹುಸಂಖ್ಯಾತರಲ್ಲಿ ಕೋಮುದ್ವೇಷವನ್ನು ಬೆಳೆಸುವ ಕಾರ್ಯವನ್ನು ನಿರಂತರವಾಗಿ ಮಾಡಲಾಗಿದೆ. ನಮ್ಮ ದೇಶದ ಚರಿತ್ರೆಯಲ್ಲಿ ಕಂಡುಬರುವ ಕೋಮು ಗಲಭೆಗಳಿಗೆ ಸಂಘ ಪರಿವಾರ ಪ್ರಚೋದನೆ ನೀಡಿದ ಬಗ್ಗೆ ಹಲವಾರು ಆಯೋಗಗಳು ತೀರ್ಪು ನೀಡಿವೆ. ಮುಸ್ಲಿಂ ಹಾಗೂ ಕ್ರಿಶ್ಚಿಯನ್ ಸಮುದಾಯದ ಧಾರ್ಮಿಕ ನಿಷ್ಠೆ ಬೇರೆ ರಾಷ್ಟ್ರಗಳಲ್ಲಿರುವುದರಿಂದ ಅವರ ರಾಷ್ಟ್ರಪ್ರೇಮ ಪ್ರಶ್ನಾರ್ಹವೆಂದು ಭಾವಿಸುತ್ತಾರೆ. ಹೀಗಾಗಿ ಇವರು ಭಾರತದ ಬಹು ಸಂಖ್ಯಾತರ ಧರ್ಮವನ್ನು ಒಪ್ಪಿಕೊಂಡು, ಯವುದೇ ಹಕ್ಕು ಭಾದ್ಯತೆಗಳಿಲ್ಲದೆ ಬದುಕಬೇಕೆಂದು ಆದೇಶಿಸುತ್ತದೆ. ಅಲ್ಪಸಂಖ್ಯಾತರು ಹಿಂದುತ್ವವನ್ನು ಒಪ್ಪಿಕೊಳ್ಳುವುದರ ಮೂಲಕ ತಮ್ಮ ರಾಷ್ಟ್ರಪ್ರೇಮವನ್ನು ಸಾಬೀತುಗೊಳಿಸಬೇಕಾಗಿದೆ. ಈ ವಾದದ ಮೂಲಕ ಒಂದು ಸರಳ ವ್ಯಾಖ್ಯಾನಕ್ಕೆ ಬರಲಾಗಿದೆ. ಬಹು ಸಂಖ್ಯಾತರ ಕೋಮುವಾದ ದೇಶ ಪ್ರೇಮದ ಸಂಕೇತ. ಅಲ್ಪಸಂಖ್ಯಾತರ ಕೋಮುವಾದ ವಿಚ್ಛಿದ್ರಕಾರಿ, ರಾಷ್ಟ್ರದ್ರೋಹಿಯಾದುದು.

ಹಿಂದುತ್ವ ಮತ್ತು ರಾಜಕಾರಣವನ್ನು ಬೆರಸಿ, ಮೂಲಭೂತವಾದದ ಮೂಲಕ ಜಾತ್ಯಾತೀತ ಸಂವಿಧಾನ ಪ್ರಶ್ನಿಸುವ ಮನಸ್ಸುಗಳನ್ನು ಹುಟ್ಟಿ ಹಾಕಲಾಗುತ್ತಿದೆ. ಶತಮಾನಗಳಿಂದ ಸೌಹಾರ್ದದಿಂದ ಬದುಕುತ್ತಿರುವ ಜನಸಮೂಹದ ನಡುವೆ ಕೋಮುದ್ವೇಷವನ್ನು ಬಿತ್ತಿ, ಜನರ ಘರ್ಷಣೆಯಲ್ಲಿ ರಾಜಕೀಯ ಲಾಭವನ್ನು ಸಂಘಪರಿವಾರದವರು ಪಡೆಯುತ್ತಿದ್ದಾರೆ. ಸಂದರ್ಭಕ್ಕೆ ತಕ್ಕಂತೆ, ಹಿಂದುಳಿದ ಜಾತಿ, ಪರಿಶಿಷ್ಟವರ್ಗ, ಆದಿವಾಸಿಗಳನ್ನು ಎತ್ತಿಕಟ್ಟಿ ತಮ್ಮ ರಾಜಕೀಯ ಉದ್ದೇಶಗಳನ್ನು ಇಡೇರಿಸಿ ಕೊಳ್ಳುತ್ತಿದ್ದಾರೆ.

ಮತಾಂತರದ ಪ್ರಶ್ನೆಯನ್ನು ಸಂಘ ಪರಿವಾರದವರು ಒಂದು ಸಾಮಾಜಿಕ, ಆರ್ಥಿಕ ಹಿನ್ನಲೆಯಲ್ಲಿ ನೋಡದೆ, ಕೇವಲ ಒಂದು ಧಾರ್ಮಿಕ ಪ್ರಶ್ನೆಯನ್ನಾಗಿಸುತ್ತಾರೆ. ಹಿಂದೂ ಸಮಾಜದೊಳಗಡೆಯಿರುವ ಅಸಮಾನತೆ, ಜಾತಿ ಪದ್ದತಿಯಿಂದ ಮೂಡಿ ಬಂದ ಅಸ್ಪೃಶ್ಯತೆ, ಪುರುಷ ಪ್ರಧಾನ ವ್ಯವಸ್ಥೆಯಿಂದ ಕುಟುಂಬದೊಳಗೆ ಹಾಗೂ ಹೊರಗೆ ಸ್ತ್ರೀಯರ ಮೇಲೆ ನಡೆಯುತ್ತಿರುವ ದೌರ್ಜನ್ಯ ಮುಂತಾದ ಸಮಸ್ಯೆಗಳ ಸುದಾರಣೆಗೆ ಹಿಂದುತ್ವವಾದಿಗಳು ಯಾವುದೇ ಪ್ರಯತ್ನಗಳನ್ನು ಮಾಡದೇ ಮುಸ್ಲಿಂ, ಕ್ರೈಸ್ತ ಧರ್ಮಗಳನ್ನು ಟಾರ್ಗೆಟ್ ಮಾಡಿಕೊಂಡು ಕೋಮುದ್ವೇಷದ ಬೀಜವನ್ನು ಜನಸಾಮಾನ್ಯರ ಮನಸ್ಸಿನಲ್ಲಿ ಬಿತ್ತುತ್ತಿದೆ. ಈ ಭ್ರಮೆಗಳನ್ನು ನಂಬುವ ಜನಸಾಮಾನ್ಯರು, ಒಂದಲ್ಲ ಒಂದು ರೀತಿಯಲ್ಲಿ ಕೋಮುಗಲಭೆಗಳಲ್ಲಿ ಭಾಗವಹಿಸುತ್ತಾರೆ, ಅಥವಾ ಗಲಭೆಗಳಿಗೆ ಮೌನವಾಗಿ ಸಮ್ಮತಿ ನೀಡುತ್ತಾರೆ.

- ರಾಜೇಶ್ವರಿ ಹೆಚ್.ಎಸ್.

# ರಂಜಾನ್ ಬಿರಿಯಾನಿ ಮತ್ತು ದೀಪಾವಳಿ ಕಜ್ಜಾಯ

ನಾವಿರುವುದು ಹಿಂದು, ಮುಸ್ಲಿಂ ಇಬ್ಬರೂ ಹೆಚ್ಚಾಗಿರುವ ಗಲ್ಲಿ, ನಾವಿರುವ ಸಾಲೆಲ್ಲಾ ಹಿಂದೂಗಳು ಹಾಗೂ ನಮ್ಮ ಮನೆ ಮುಂದಿನ ಸಾಲೆಲ್ಲಾ ಮುಸ್ಲಿಂಮರು. ಊರಲ್ಲೆಲ್ಲಾ ಕೋಮು ಗಲಭೆಗಳಾದರೂ ನಮ್ಮ ಗಲ್ಲಿ ಮಾತ್ರ ಮಾಮೂಲಿಯಾಗೆ ಇರುತ್ತೆ. ಅಷ್ಟೊಂದು ಸಾಮರಸ್ಯದಿಂದ್ದೇವೆ. ಇನ್ನೊಂದು ರೀತಿಯಲ್ಲಿ ಹೇಳಬೇಕೆಂದರೆ ಮುಸ್ಲಿಂರು ನಮ್ಮ ಜೀವನದ ಭಾಗವಾಗಿದ್ದಾರೆ. ಏಕೆಂದರೆ ನಮ್ಮ ಎಲ್ಲಾ ಕಷ್ಟಸುಖಗಳಿಗೆ, ಅವರ ಎಲ್ಲಾ ದುಃಖ ದುಮ್ಮಾನಗಳಿಗೆ ನಾವು ಸ್ಪಂದಿಸುವರಾಗಿದ್ದೇವೆ. ನಮ್ಮ ಧರ್ಮಗಳು ನಮ್ಮ ಸಾಮರಸ್ಯಕ್ಕೆ ಎಂದೂ ಅಡ್ಡಿಯಾಗಿಲ್ಲ. ಯುಗಾದಿ, ದೀಪಾವಳಿ, ಗಣೇಶ, ವರಮಹಾಲಕ್ಷ್ಮಿ ಇದರ ಹಬ್ಬಕ್ಕೆ ಮಾಡುವ ಸ್ಪೆಷಲ್ ಅಡಿಗೆಗಳನ್ನ ಅವರ ಮನೆಮುಂದಿಗೆಲ್ಲಾ ಕೊಡುತ್ತೇವೆ. ಹಾಗೆಯೇ ರಂಜಾನ್, ಈದ್ ಮಿಲಾದ್, ಬಕ್ರೀದ್ ಹಬ್ಬಗಳಿಗೆ ಮಾಡುವ ನಾನ್-ವೆಜ್ ಮತ್ತು ಸಿಹಿಗಳನ್ನ ನಮಗೆ ಕೊಡುತ್ತಾರೆ. ಅಮ್ಮ ತಿನ್ನುವುದಿಲ್ಲವೆಂದು ಅವರಿಗೆ ಸೆಪರೇಟ್ ಆಗಿ ಎಲೆ, ಅಡಿಕೆ, ತೆಂಗಿನಕಾಯಿ, ಹೂವು, ಬಾಳೆಹಣ್ಣು ಇಟ್ಟು ತಾಂಬೂಲ ಕೊಡುತ್ತಾರೆ. ಅದರಲ್ಲೂ ನಮ್ಮ ಮದ್ವೆಗಳಲ್ಲಿ ಮಾಡುವ ಕಜ್ಜಾಯ, ಹೋಳಿಗೆ ಎಂದರೆ ಅವರಿಗೆ ಪಂಚ ಪ್ರಾಣ. ಅಲ್ಲಿರುವ ಮುಸ್ಲಿಂ ಟೈಲರ್ಸ್ ಸಹ ಒಂದೆರಡು ಕಜ್ಜಾಯ ಇದ್ದರೆ ಕೊಡೀ ಅಕ್ಕ ಎಂದು ಕೇಳುವಷ್ಟರ ಮಟ್ಟಿಗೆ ಸಲಿಗೆ ಇದೆ.

ಅಫೀದಾ ಅವರ 3 ವರ್ಷದ ಮಗಳು ಸಲ್ಲು ಅಮ್ಮ ದೇವಸ್ಥಾನಕ್ಕೆ ಹೋಗಲು ಗಾಡಿ ಸ್ಟಾರ್ಟ್ ಮಾಡಿದರೆ ಸಾಕು ನಾನು ಬರುತ್ತೇನೆ ಅಂತ ಹಠ ಮಾಡಿ ದೇವಸ್ಥಾನಕ್ಕೆ ಹೋಗುತ್ತಾಳೆ. ದೇವಸ್ಥಾನದಲ್ಲಿ ಸುತ್ತು ಹಾಕುವುದು, ಅಲ್ಲಿ ನಡೆಯುವ ಭಜನೆಯಲ್ಲಿ ಕುಳಿತು ಚಪ್ಪಾಳೆ ತಟ್ಟುವುದು, ಅಲ್ಲೆಲ್ಲಾ ಓಡಾಡಿಕೊಂಡು ಬರುತ್ತಾಳೆ. ಅದು ಹೇಗೆ ಆ ಮಗುವಿನ ಮನಸ್ಸಿನಲ್ಲಿ ದ್ವೇಷ ತುಂಬುವುದು. ನಮ್ಮಲ್ಲಿ ಮಕ್ಕಳು ಸಹ ಮುಕ್ತವಾಗಿ ಬೆಳೆಯುವಂತಹ ಪರಿಸರವಿಲ್ಲ.

ನನ್ನ ಚಿಕ್ಕಮ್ಮ ಆ ಕಾಲದಲ್ಲೇ ಇಡೀ ನಮ್ಮ ಹಳ್ಳಿಯವರನ್ನೆಲ್ಲಾ ಎದುರಾಕಿಕೊಂಡು ಮುಸ್ಲಿಂ ವ್ಯಕ್ತಿಯನ್ನು ಮದುವೆಯಾದರು. ನಮ್ಮ ಕುಟುಂಬದ ಸ್ವಜಾತಿಯಲ್ಲೇ ಮದುವೆಯಾದ ಎಲ್ಲರಿಗಿಂತ ಸುಖವಾಗಿ, ಮುಖ್ಯವಾಗಿ ನೆಮ್ಮದಿಯಾದ ಜೀವನ ನಡೆಸುತ್ತಿದ್ದಾರೆ. ಅವರಿಬ್ಬರ ಸಂಸಾರಿಕ ಜೀವನಕ್ಕೆ ಅವರ ಧರ್ಮಗಳು ಅಡ್ಡಿ ಬರಲಿಲ್ಲ. ನನಗನಿಸಿದ್ದು ಮದುವೆಗೆ, ಇಲ್ಲವೆ ಒಟ್ಟಾಗಿ ಬದುಕಲು ಮಾನವೀಯತೆ, ಅರ್ಥ ಮಾಡಿಕೊಳ್ಳುವ ಮನಸ್ಸು, ಪ್ರೀತಿ, ಸ್ಪಂದಿಸುವ ಹೃದಯದ ಜೊತೆಗೆ ಆರ್ಥಿಕವಾಗಿ ಸಬಲರಾಗಿದ್ದರೆ ಯಾವುದೇ ಧರ್ಮಗಳು ಮುಖ್ಯವಾಗುವುದಿಲ್ಲ. ಅಲ್ಲಿ ಮನುಷ್ಯ ಸಂಬಂಧಗಳೇ ಮುಖ್ಯವಾಗುತ್ತೆ. ಹಾಗೂ ನಾವು ಈ ವಿಚಾರಗಳನ್ನು ಒಪ್ಪಿಕೊಳ್ಳುವುದರ ಮೇಲೆ ಹೋಗುತ್ತೆ.

ನನ್ನ ತಂಗಿ ಪ್ರಭಾಗೆ ಎಡಗೈ ಇಲ್ಲ. ಆಕ್ಸಿಡೆಂಟ್‌ನಲ್ಲಿ ಕೈ ಕಳೆದುಕೊಂಡಳು. ಈವಾಗಲೂ ಅವಳು ಕೋಲಾರಕ್ಕೆ ಬಂದರೆ ಎದುರು ಮನೆಯ ಸಹೀದಾನೇ ಜಡೆ ಹಾಕುವುದು. ಏಕೆಂದರೆ ಅವಳಿಗೆ ನಾವು ಹಾಕುವ ಜಡೆ ಇಷ್ಟವಾಗುವುದಿಲ್ಲ. ಸಹೀದಾ ಅಂತೂ ಏನೂ ಬೇಜಾರಿಲ್ಲದೆ ಜಡೆ ಹಾಕುತ್ತಾಳೆ. ಅಕ್ಕಾಕಿ ಬೇಟಿ ಅಂತ ನಮ್ಮ ತಂಟೆಗೆ ಯಾರೂ ಬರುವುದಿಲ್ಲ. ಸುಮಾರು ವರ್ಷಗಳಿಂದ ಅದೇ ಬೀದಿಯಲ್ಲೇ ಇದ್ದೇವೆ ಇದುವರೆಗು ಯಾವುದೇ ಪ್ರಾಬ್ಲಮ್ ಆಗಿಲ್ಲ. ರಾತ್ರಿ ಎಷ್ಟೇ ಹೊತ್ತಿನಲ್ಲಿ ಏನಾದರೂ ಶಬ್ದವಾದರೆ ಗಲಭೆಗಳಾದರೆ ನಮ್ಮ ಎದುರು ಮನೆಯವರು ಮೊದಲು ಬಾಗಿಲು ತೆಗೆದು, ಏನಾಯಿತು ಅಂತ ವಿಚಾರಿಸಿ, ಎಲ್ಲಾ ಶಾಂತವಾದ ಮೇಲೆ ಹೋಗುತ್ತಾರೆ.

1991-92 ರಲ್ಲಿ ಕೋಲಾರದಲ್ಲಿ ಸುಮಾರು ದಿನಗಳು ಹಿಂದು-ಮುಸ್ಲಿಂ ಗಲಾಟೆಗಳಾದವು. ಆ ಸಮಯದಲ್ಲಿ ದಿನಬಳಕೆಯ ವಸ್ತುಗಳು ಸಿಗುವುದು ಕಷ್ಟವಾಗುತ್ತಿತ್ತು. ಅಂತಹ ಸಮಯದಲ್ಲಿ ಬೆಳಿಗ್ಗೇನೆ ಕೆಲವರು ಹೊರಗಡೆ ಹೋಗಿ ತರಕಾರಿ ತಂದರೆ ನಮ್ಮ ಮನೆಗಳಿಗೂ ಕೊಟ್ಟು ತಾವು ಇಟ್ಟುಕೊಳ್ಳುತ್ತಿದ್ದರು. ಆಗ ನಾನು ಇನ್ನು ಡಿಗ್ರಿ ಓದುತ್ತಿದ್ದೆ. ನಿಜವಾಗಲೂ ತುಂಬಾ ಖುಷಿಯಾಗುತ್ತಿದ್ದುದು ಸಂಬಂಧಗಳಲ್ಲಿ.

ಯಾಕೆ ಈ ಮೇಲಿನ ವಿಚಾರಗಳನ್ನು ಹೇಳುತ್ತೇನೆ ಅಂದರೆ ಇಂದು ಗುಜರಾತ್‌ನಲ್ಲಿ ನಡೆಯುತ್ತಿರುವ ಕೋಮುಗಲಭೆಗಳನ್ನು ನೋಡಿ ಮನಸ್ಸಿಗೆ ತುಂಬಾ ನೋವಾಗುತ್ತದೆ. ಹಾಗೆಯೇ ಸಿಟ್ಟು ಬರುತ್ತದೆ. ತಮ್ಮ ಸ್ವಾರ್ಥ ರಾಜಕೀಯಕ್ಕಾಗಿ ಅಮಾಯಕ ಜನರನ್ನ ಅಸಹಾಯರಾಗಿ ಮಾಡಲು ಯಾವ ಕೆಳಮಟ್ಟಕ್ಕೂ ಇಳಿಯಲು ಸಾಧ್ಯ ಎನ್ನುವುದನ್ನು ಗುಜರಾತಿನ ಘಟನೆಗಳು ತೋರಿಸಿಕೊಟ್ಟಿದೆ. ಅಲ್ಲಿನ ಅಲ್ಪಸಂಖ್ಯಾತರು ಈ ಹೊಡೆತಗಳಿಂದ ಹೊರಬರಲು ಸುಮಾರು ವರ್ಷಗಳೇ ಬೇಕಾಗಬಹುದು. ಆ ಮನಸ್ಸುಗಳನ್ನು ಸಹಜ ಸ್ಥಿತಿಗೆ ತರಲು ನಾವೇನು ಮಾಡಬಹುದು ಅಂತ ಯೋಚಿಸುತ್ತೇನೆ. ದುರಂತ ಅಂದರೆ ಏನೂ ಮಾಡಲು ಸಾಧ್ಯವಾಗುತ್ತಿಲ್ಲ. ಕೊನೇಪಕ್ಷ ನಾವಿರುವ ಏರಿಯಾದಲ್ಲಾದರೂ ಸಾಮರಸ್ಯ ಜೀವನ ನಡೆಸಿದರೆ ಸಾಕೆನಿಸಿದೆ. !

- ಶ್ಯಾಮಲ

ವಿ.ಹೆಚ್.ಪಿ. ತಾನು ನೇತೃತ್ವ ವಹಿಸಿರುವ ಚಳುವಳಿಯು ಹಿಂದೂ ಸಮುದಾಯಕ್ಕೆ ಸೇರಿದ್ದು ರಾಜಕೀಯವಾಗಿ ಜಾಗೃತವಾಗಿರುವ ಒಂದು ವರ್ಗದ ಪ್ರಾತಿನಿಧಿಕ ಸಂಘಟನೆ ಮಾತ್ರವಾಗಿರದೇ ತನ್ನೊಳಗೆ ಸಮಗ್ರ ಹಿಂದೂ ಸಮುದಾಯವು ವಿಲೀನಗೊಂಡಿದೆ ಎಂದೇ ವಿ.ಹೆಚ್.ಪಿ. ಘೋಷಿಸಿತು. ಹಿಂದೂ ಸಮುದಾಯ ಹಲವು ಬಗೆಯ ವಿರಳಿತಗಳು, ಮೇಲು, ಕೀಳು ಬಹು ಸಂಸ್ಕೃತಿಗಳು ಉಳ್ಳಂದ್ದೆಂಬುದನ್ನು ವಿ.ಹೆಚ್.ಪಿ. ಸಾಮಾಜಿಕವಾಗಿ ಒಪ್ಪಿಕೊಂಡಿತ್ತು. ಆದರೆ ಈ ಸೀಮೆಯೊಳಗೆ ತನ್ನ ಕಾರ್ಯಕ್ಷೇತ್ರ ಯಾವುದೆಂಬುದನ್ನು ಅದು ಗುರುತಿಸಿಕೊಂಡಿತ್ತು. ಹಿಂದಿ ಭಾಷಿಕ ಪ್ರದೇಶದಲ್ಲಿ ಮಾತ್ರ ತನಗಿದ್ದ ಬೆಂಬಲ, ಸಹಾನುಭೂತಿಯನ್ನು ಇತರ ಪ್ರಾಂತ್ಯಗಳಿಂದಲೂ ಪಡೆದುಕೊಳ್ಳುವ ಉದ್ದೇಶ ಹೊಂದಿ ಅದು ರಾಮನನ್ನು ವ್ಯಾಪಕವಾಗಿ ಬಳಸಿಕೊಳ್ಳಲಾರಂಭಿಸಿತು. ಈ ಕಾರ್ಯತಂತ್ರದಿಂದಾಗಿ ಹೊಸ ಹೊಸ ಪ್ರಾಂತ್ಯಗಳಲ್ಲೂ ರಾಮನಾಮದ ಮಂತ್ರ ಪ್ರತಿಧ್ವನಿಸತೊಡಗಿತು. ಉದಾ. ಬಂಗಾಲದಲ್ಲಿ ಪ್ರಚಲಿತವಾಗಿರುವ ರಾಮಾಯಣದ ಕತೆಯ ಸಾರಕ್ಕು ಹಿಂದಿ ಭಾಷಿಕ ಪ್ರದೇಶಗಳಲ್ಲಿ ರಾಮಾಯಾಣದ ಕಥಾ ಸಾರಕ್ಕೂ ತುಂಬಾ ವ್ಯತ್ಯಾಸವಿದೆ. ಮೇಲಾಗಿ ಬಂಗಾಳದಲ್ಲಿ ರಾಮ ಮುಖ್ಯ ಅರಾಧ್ಯ ದೈವ ಅಲ್ಲ. ಅಲ್ಲಿ ದುರ್ಗಾ, ಕಾಳಿ ಹಾಗೂ ಕೃಷ್ಣ ಪ್ರಮುಖ ದೈವ. ಆದಾಗ್ಯೂ ವಿ.ಹೆಚ್.ಪಿ ತನ್ನ ವಿಶಿಷ್ಠ ಕಾರ್ಯತಂತ್ರದ ಮುಖಾಂತರ ಬಂಗಾಲದಲ್ಲೂ ರಾಮನಿಗೆ ಮನ್ನಣೆಯನ್ನು ದೊರಕಿಸಿಕೊಟ್ಟಿತು. ದುರ್ಗಾ, ಕಾಳಿ, ಕೃಷ್ಣರನ್ನು ಆರಾಧಿಸುತ್ತಿದ್ದ ಸಾಮಾನ್ಯ ಹಿಂದೂ ಸಮಾಜ ಸಹಜವೆಂಬಂತೆ ರಾಮನನ್ನು ಆರಾಧ್ಯ ದೈವವಾಗಿ ಸ್ವೀಕರಿಸಿತು.

ಹಿಂದೂ ಕೋಮುವಾದಿ ಸಂಘಟನೆಗಳು ಸಮೂಹಸನ್ನಿಯನ್ನು ಸೃಷ್ಠಿಸಲು ಬಳಸಿದ ತಂತ್ರ ನಿಜಕ್ಕೂ ವಿಲಕ್ಷಣವಾಗಿದೆ. ಈ ಬಗೆಯ ತಂತ್ರ ಬಳಸಿಯು ಅವರು ತಮ್ಮ ಲೆಕ್ಕಾಚಾರದಲ್ಲಿ ಗೆದ್ದಿದ್ದು ಇನ್ನು ವಿಲಕ್ಷಣವಾಗಿದೆ. ನಾನಾ ನಮೂನೆ, ವಿಚಾರದಾರೆ, ನಂಬಿಕೆ, ಪ್ರಾಮುಖ್ಯತೆ ಹಾಗೂ ಆದ್ಯತೆಗಳನ್ನು ಹೊಂದಿರುವ ಹಿಂದೂ ಸಮುದಾಯದ ಬಹುತೇಕ ಜನ ಸಮೂಹಗಳನ್ನು ಒಂದುಗೂಡಿಸಲು ಹಿಂದೂ ಕೋಮುವಾದಿ ಸಂಘಟನೆಗಳು ಈ ವಿಲಕ್ಷಣ ತಂತ್ರ ಬಳಸಿವೆ.

ವಿ.ಹೆಚ್.ಪಿ. ಬಳಸಿದ ಇನ್ನೊಂದು ಕುತಂತ್ರವೆಂದರೆ ಮುಸ್ಲಿಂ, ಕ್ರೈಸ್ತ ಧರ್ಮೀಯರನ್ನು ಹೊರತುಪಡಿಸಿ ಬಹುತೇಕ ಇನ್ನೆಲ್ಲ ಧರ್ಮಗಳ ಸಮುದಾಯಗಳನ್ನು ಒಂದಿಲ್ಲ ಒಂದು ರೀತಿಯಲ್ಲಿ ಸೆಳೆದುಕೊಳ್ಳುವ ಉಪಾಯ ಹೂಡಿದ್ದು. ಉತ್ತರ ಭಾರತದ ಕೆಲವು ಕಡೆ ವಾಲ್ಮೀಕಿ ಮತ್ತು ರವಿದಾಸರ ಜಯಂತಿಗಳನ್ನು ಆಚರಿಸಲು ತನ್ನ ಕಾರಕರ್ತರಿಗೆ ಸೂಚಿಸಿತು. ಇವರು ಹಿಂದೂ ಸಮಾಜದ ದಲಿತ ವರ್ಗಗಳನ್ನು ಪ್ರತಿನಿಧಿಸುವ ಧೀಮಂತರು. ಸಿಖ್ ಮತ್ತು ಬೌದ್ಧ ಧರ್ಮಗಳಿಗೆ ಸಂಬಂಧಿಸಿದಂತೆ ಕೂಡಾ ವಿ.ಹೆಚ್.ಪಿ ಇಂಥದೇ ತಂತ್ರ ಬಳಸಿತು. ಆದರೆ ಇದರ ಗರಿಷ್ಠ ಮಟ್ಟದ ಕುಟಿಲತೆ ಎಲ್ಲಿದೆಯೆಂದರೆ ಹಿಂದೂ ಸಮಾಜದ ವ್ಯವಸ್ಥೆಯಲ್ಲಿ ಎಲ್ಲಾ ಸಮುದಾಯಗಳನ್ನು ಒಗ್ಗಟ್ಟಾಗಿಸುವಲ್ಲಿ ಪ್ರಯತ್ನಿಸಿತೇ ಹೊರತು ಈ ಸಮುದಾಯಗಳಲ್ಲಿ ಸಮಾನತೆ ಸಾಧ್ಯವಾಗಿಸುವ ಯಾವ ಪ್ರಯತ್ನಕ್ಕೂ ಅದು ಮುಂದಾಗಿರಲಿಲ್ಲ. ಎಲ್ಲ ಸಮುದಾಯಗಳು ಮುಸ್ಲಿಮರು ಮತ್ತು ಕ್ರೈಸ್ತರ ವಿರುದ್ಧ ಒಂದಾಗಿ ನಿಲ್ಲಬೇಕೆಂಬುದು ಮಾತ್ರ ವಿ.ಹೆಚ್.ಪಿ ಯ ಗುರಿಯಾಗಿತ್ತೇ ಹೊರತು ಸಮಾಜ ವ್ಯವಸ್ಥೆಯಲ್ಲಿನ ಮೇಲು, ಕೀಳು ಅಳಿಯಬೇಕೆಂಬುದು ಅದರ ಗುರಿಯಾಗಿರಲಿಲ್ಲ.

ವಿ.ಹೆಚ್.ಪಿ. ಗೆ ಹಿಂದೂ ಧರ್ಮದ ಅರ್ಥಶಾಸ್ತ್ರ ಹಾಗೂ ಮನುಸ್ಮೃತಿ ಶ್ರೇಷ್ಠ ಗ್ರಂಥಗಳು. ಇವುಗಳು ಸಾರುವ ಸಂದೇಶ ಅದಕ್ಕೆ ವೇದ ಸಮಾನ. ರಾಜ್ಯಾಧಿಕಾರದ ಎದುರು ಪ್ರಜೆಗಳು ಅಣುಮಾತ್ರದವರು. ರಾಜ್ಯ ಹಿತಕ್ಕಾಗಿ ಸರ್ವಸ್ವ ತ್ಯಾಗಕ್ಕೂ ಪ್ರಜೆಗಳು ಸಿದ್ಧರಾಗಿರಬೇಕು ಎಂಬ ಈ ಗ್ರಂಥಗಳ ಸಂದೇಶವನ್ನು ಅದು ಚಾಚೂ ತಪ್ಪದೇ ಎತ್ತಿ ಹಿಡಿಯ ಬಯಸುತ್ತದೆ. ಮನುಷ್ಯ ಬದುಕಿನ ಪ್ರತಿಯೊಂದು ಸಂದರ್ಭದ ಮೇಲೂ ತನ್ನ ಹದ್ದಿನ ನೋಟ ಬೀರುವುದನ್ನು ಸಮರ್ಥಿಸುವ ಈ ವ್ಯವಸ್ಥೆ ವಿ.ಹೆಚ್.ಪಿ.ಗೆ ಆದರ್ಶ ! ವ್ಯವಸ್ಥೆಯನ್ನು ವಿವಿಧ ಗುಂಪುಗಳಲ್ಲಿ ವಿಂಗಡಿಸಿ ಒಂದೊಂದಕ್ಕೂ ಒಂದೊಂದು ದರ್ಜೆ, ಕೆಲಸ ಹಾಗೂ ಯೋಗ್ಯತೆಗಳನ್ನು ತಾನೇ ನಿರ್ಧರಿಸಿ ಇಂಥ ವ್ಯವಸ್ಥೆಯ ಉಸ್ತುವಾರಿ ನೋಡಿಕೊಳ್ಳುವುದು ಹೇಗೆಂದು ವಿವರಿಸುವ ಮನುಸ್ಮೃತಿ ಅದಕ್ಕೆ ಆದರ್ಶ.

ಕುಟುಂಬದೊಳಗೂ ವ್ಯಕ್ತಿಗೆ ಹೆಚ್ಚಿನ ಅಧಿಕಾರವಿಲ್ಲ. ಕುಟುಂಬದ ಹೊಣೆ ಹೊತ್ತ ಯಜಮಾನ ಕುಟುಂಬದ ಹಿತಾಸಕ್ತಿ ಯಾವುದು ಎಂಬುದು ನಿರ್ಧರಿಸುತ್ತಾನೆ. ಅವನ




ಹೊಸ ಯುಗದ ಶಿಲಾ ಮಾನವ

ಅಪೇಕ್ಷೆ ಆಣತಿಗಳಂತೆ ನಡೆದುಕೊಳ್ಳುವುದೇ ಆ ಕುಟುಂಬದ ಪ್ರತಿಯೊಬ್ಬ ಸದಸ್ಯರ ಪರಮ ಕರ್ತವ್ಯ. ಹೀಗೆ ನೋಡಿಕೊಳ್ಳದವರು ಆ ಕುಟುಂಬಕ್ಕೇ ದ್ರೋಹ ಎಸಗುವವರು; ಅವರು ಆ ಕುಟುಂಬದ ಸದಸ್ಯರಾಗಿರಲು ಅನರ್ಹರು ಎಂಬ ಹಿಂದುತ್ವದ ವ್ಯಾಖ್ಯಾನದಲ್ಲಿ, ಅಭಿಪ್ರಾಯ ಸಂಗ್ರಹಣೆ, ಭಿನ್ನಾಭಿಪ್ರಾಯದ ಪರಿಶೀಲನೆ, ಅಹಿತವೆನಿಸುವ ಅಭಿಪ್ರಾಯವನ್ನೂ ಗೌರವಿಸುವ ಉದಾರತೆ ಯಾವುದಕ್ಕೂ ಸ್ಥಾನವಿಲ್ಲ. ಇದೇ ವಾದವನ್ನು ಹಿಂದುತ್ವವಾದಿಗಳು ವಿಸ್ತರಿಸಿ, ಕುಟುಂಬಕ್ಕೆ ಅನ್ವಯಿಸುವುದನ್ನೇ ರಾಷ್ಟ್ರಕ್ಕೂ ಅನ್ವಯಿಸಿಬಿಡುತ್ತಾರೆ. ಹಾಗಾಗಿಯೇ ಹಿಂದುತ್ವವಾದಿಗಳು ಪ್ರಜಾಪ್ರಭುತ್ವ ವ್ಯವಸ್ಥೆಯ ಅಪ್ಪಟ ವಿರೋಧಿಗಳು.

ನಾವು ರಾಷ್ಟ್ರ ಸೇವಿಕಾ ದಳದ ಸದಸ್ಯೆಯರನ್ನು ಸಂದರ್ಶಿಸಿ, ಈ ಕುರಿತು ಅಭಿಪ್ರಾಯ ಕೇಳಿದೆವು. ಹಿಂದುತ್ವವಾದಿಗಳ ವ್ಯಾಖ್ಯಾನವನ್ನು ಅವರೂ ಪೂರ್ತಿಯಾಗಿ ಬೆಂಬಲಿಸಿದರು. ಸಂಸಾರದ ಹಿತ, ಮಕ್ಕಳ ವಿದ್ಯಾಭ್ಯಾಸ, ಉದ್ಯೋಗ, ಮದುವೆ ಇತ್ಯಾದಿ ಎಲ್ಲಾ ವಿಚಾರಗಳಲ್ಲಿ ಮನೆಯ ಯಜಮಾನರ ಅಭಿಪ್ರಾಯ ಆದೇಶಗಳನ್ನು ಮನ್ನಿಸುವುದೇ ಮನೆಮಂದಿಯ ಕರ್ತವ್ಯ ಎಂದೇ ಅವರು ಹೇಳಿದರು. ವೈಯಕ್ತಿಕ ಆಸೆ-ಅಪೇಕ್ಷೆಗಳನ್ನು ಕುಟುಂಬದ ಹಿತ (ಇದನ್ನು ಮನೆಹಿರಿಯ ಮಾತ್ರ ನಿರ್ಧರಿಸಬಲ್ಲ) ಕ್ಕಾಗಿ ತ್ಯಾಗ ಮಾಡಬೇಕೆಂದೂ ಅವರು ಅಭಿಪ್ರಾಯಪಟ್ಟರು.

ಆರೆಸ್ಸೆಸ್ ಮುಖಂಡ ಶೇಷಾದ್ರಿ, ಮಹಿಳೆಯರು ಉದ್ಯೋಗ ಅರಸಿದಲ್ಲಿ ಸಂಸಾರ ಹಿತವನ್ನು ಬಲಿಗೊಟ್ಟಂತೆಯೇ ಎಂದು ಅಭಿಪ್ರಾಯಪಡುತ್ತಾರೆ. ಅನಿವಾಸಿ ಭಾರತೀಯ ಮಹಿಳೆಯೊಬ್ಬಳು (ಈಕೆ ವಿಎಚ್‌ಪಿ ಕಾರ್ಯಕರ್ತೆ) ಅಮೆರಿಕೆಯಲ್ಲಿನ ತನ್ನ ಬ್ಯಾಂಕ್ ಅಧಿಕಾರಿ ಕೆಲಸಕ್ಕೆ ರಾಜೀನಾಮೆ ನೀಡಿ, ಮಕ್ಕಳ ಲಾಲನೆ-ಪಾಲನೆಯನ್ನೇ ತನ್ನ ಜೀವನದ ಕರ್ತವ್ಯವನ್ನಾಗಿ ಮಾಡಿಕೊಂಡ ಪ್ರಸಂಗವೊಂದನ್ನು ಅವರು ಉತ್ತಮ ಆದರ್ಶವೆಂದು ಘೋಷಿಸಿ ಬಣ್ಣಿಸುತ್ತಾರೆ. ಅನಿವಾಸಿ ಭಾರತೀಯರ ಮಕ್ಕಳು ವಿದೇಶದಲ್ಲಿ ನೆಲೆಸಿರುವಷ್ಟು ಕಾಲ ಪಾಶ್ಚಿಮಾತ್ಯ ಚಿಂತನೆಗೆ ಮಾರು ಹೋಗದಂತೆ ತಮ್ಮನ್ನು ತಾವು ಹಗಲೂ ರಾತ್ರಿ ರಕ್ಷಿಸಿಕೊಳ್ಳಬೇಕೆಂದೂ, ಅವರು ಕರೆ ಕೊಡುತ್ತಾರೆ. ಅನಿವಾಸಿ ಭಾರತೀಯ ವಧು-ವರರ ಹೊಂದಾಣಿಕೆಯ ಸಂದರ್ಭದಲ್ಲೂ ಕೂಡ ವಿ.ಹೆಚ್.ಪಿ ''ಒಂದೇ ಹಂತದ ಕುಟುಂಬಗಳಲ್ಲಿ ನಡೆಯುವ ವಿವಾಹ ಸಂಬಂಧ ಮಾತ್ರ ಶಾಶ್ವತವಾಗಿರಬಲ್ಲದು'' ಎಂಬ ಅಭಿಪ್ರಾಯ ಮೂಡಿಸುವ ಮೂಲಕ, ಹಿಂದೂಗಳಲ್ಲೇ ನಡೆಯಬಹುದಾದ ಒಳಜಾತಿ, ಅಂತರಜಾತಿ, ಅಂತರಭಾಷೆ, ಅಂತರರಾಜ್ಯ.... ವೈವಾಹಿಕ ಸಂಬಂಧಗಳನ್ನು ಅದು ತಪ್ಪಿಸುವ ಕುತಂತ್ರವನ್ನೇ ಹೊಂದಿದೆ. 'ಒಂದೇ ಹಂತ' ಎಂಬುದನ್ನು 'ಒಂದೇ ಆರ್ಥಿಕ ಮಟ್ಟದ' ಎಂದೂ ಅದು ವ್ಯಾಖ್ಯಾನಿಸುವುದು ಸಾಧ್ಯವಿದೆ.

ಪತಿ-ಪತ್ನಿ ಸಂಬಂಧ ಕುರಿತ ಹಿಂದೂ ನಂಬಿಕೆಯ ಮೇಲೆ ಸಹಜವಾಗಿ ವಿಶ್ವಾಸ ಇಟ್ಟಿರುವ ವ್ಯಾಪಾರ ವರ್ಗದ ಮುಂದೆ ವಿಲಕ್ಷಣ ವಿಶ್ಲೇಷಣೆಯನ್ನು ಮಂಡಿಸುವ ಮೂಲಕ ಹಿಂದುತ್ವವಾದಿಗಳು ತಮ್ಮ ನೀತಿಯ ಪರಿಸಾಟಿಯಿಲ್ಲದ ಕುತಂತ್ರವನ್ನು ಹೆಣೆದಿದ್ದಾರೆ. ಖುರ್ಜಾದಲ್ಲಿ ನಾವು ಭೇಟಿಯಾದ ಆರೆಸ್ಸೆಸ್ ಸಂಘಚಾಲಕರು, ರಾಮಾಯಣದಲ್ಲಿ ಸೀತೆಯ ಶೀಲ ಕುರಿತು ಹೇಳುವ ಸಂದರ್ಭವನ್ನು ಪ್ರಸ್ತಾಪಿಸಿದರು. ಆ ಸಂದರ್ಭದಲ್ಲಿ ತನ್ನ ಶುದ್ಧ ಚಾರಿತ್ರ್ಯ ನಿರೂಪಿಸಲು ಸೀತೆ ಅಗ್ನಿ ಪ್ರವೇಶಿಸಿದ್ದರಿಂದಲೇ ಇಂದು ಕೋಟ್ಯಂತರ ಹಿಂದೂ ಮಹಿಳೆಯರು ಆಕೆಯನ್ನು ತಮ್ಮ ಪರಮಾದರ್ಶವಾಗಿ ಭಾವಿಸುವುದು ಸಾಧ್ಯವಾಗಿದೆ ಎಂದು

ಅವರು ತಮ್ಮ ತೀರ್ಪು ನೀಡಿದರು. ಹೀಗಾಗಿ ಸೀತೆಯನ್ನು ಪೂಜಿಸುವ ತಮ್ಮ ಮಹಿಳೆಯರ ಶೀಲವನ್ನು ಪ್ರಶ್ನಿಸದಿರುವುದೂ ಹಿಂದೂ ಪುರುಷರಿಗೆ ಸಾಧ್ಯವಾಗಿದೆ ಎಂಬುದನ್ನೂ ಅವರು ಸೇರಿಸಿದರು. ಆದ್ದರಿಂದ ಹಿಂದೂ ವ್ಯಾಪಾರಿ ವರ್ಗದವರು, ಮನೆ ಕಡೆಯ ಚಿಂತೆ ಮರೆತು ಸಮಾಧಾನದಿಂದ ವ್ಯಾಪಾರಕ್ಕಾಗಿ ಪ್ರಯಾಣ ಬೆಳೆಸುತ್ತಾನೆ ಎಂಬುದೂ ಅವರ ವ್ಯಾಖ್ಯಾನವಾಗಿತ್ತು.

ಈ ಹಿಂದೂ ನಂಬಿಕೆ ಹಾಗೂ ಶ್ರೇಷ್ಠತೆಗೆ ಪರ್ಯಾಯವಾಗಿ ಪಾಶ್ಚಿಮಾತ್ಯ ಸಮಾಜ ವ್ಯವಸ್ಥೆಯಲ್ಲಿ ಏನು ಕಾಣುತ್ತಿದೆಯೆಂದು ಶೇಷಾದ್ರಿ ವಿವರಿಸುತ್ತಾರೆ: ವಿಧವಾ ವಿವಾಹ, ವಿಚ್ಛೇದನೆ, ವ್ಯಭಿಚಾರ, ಮಾದಕ ವಸ್ತುಗಳ ಸೇವನೆ ಹಾಗೂ ಸ್ವಚ್ಛಂದ ಕಾಮಕೇಳಿಗಳೇ ಪಾಶ್ಚಿಮಾತ್ಯ ಸಂಸ್ಕೃತಿಯ ಕೊಡುಗೆಗಳಾಗಿವೆ. ಪಾಶ್ಚಿಮಾತ್ಯನಿಗೆ ತಾಯಿ, ಪತ್ನಿ, ಸೋದರಿ ಹಾಗೂ ಮಗಳಲ್ಲಿ ವ್ಯತ್ಯಾಸವೇ ಕಾಣುವುದಿಲ್ಲ. ಆದರೆ ಭಾರತೀಯ ಸಂಸ್ಕೃತಿ-ಪರಂಪರೆಗಳ ಮೂಸೆಯಲ್ಲಿಂದ ಹಾದು ಬಂದವ ಹಿತ-ಮಿತಗಳನ್ನು ಚೆನ್ನಾಗಿ ಬಲ್ಲವ. ಇದು ಶೇಷಾದ್ರಿ ಅವರ ತೀರ್ಪು.

ಆದರೆ ಅಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಹಿಂದುತ್ವವಾದಿಗಳ ಅಭಿಪ್ರಾಯವು ಮಹಿಳೆಯರನ್ನು ಮಾತ್ರ ಮಿತಿಗಳಲ್ಲಿಡುವುದನ್ನು ಹೇಳುತ್ತದೆ. ಶೀಲದ ಬಗ್ಗೆ ಪುರುಷರಿಗಿಂತ ಮಹಿಳೆಯರೇ ಹೆಚ್ಚು ಪಾವಿತ್ರ್ಯ ಭಾವನೆ ಹೊಂದಿದ್ದಾರೆಂಬುದನ್ನು ಗುರುತಿಸುವ ಪ್ರಯತ್ನವನ್ನೆ ಮಾಡದೇ, ಹಿಂದುತ್ವವಾದಿಗಳು - ಶೇಷಾದ್ರಿಯವರೂ ಸೇರಿದಂತೆ - ತಮ್ಮ ಸಂಸ್ಕೃತಿ-ಪರಂಪರೆಗಳು ಮಹಿಳೆಯರ ಮೇಲೆ ಮಾತ್ರ ನಿರ್ಬಂಧನೆಗಳನ್ನು ಹೇರಬಯಸುತ್ತವೆ; ಪುರುಷರಿಗೆ ಎಲ್ಲಾ ಬಗೆಯ ಸ್ವಚ್ಛಂದತೆಯ ಅವಕಾಶಗಳೂ ಇವೆ ಎಂದೇ ಹೇಳುತ್ತಿದ್ದಾರೆಂದು ಅರ್ಥಪೂರ್ಣವಾಗಿ ಸಾಬೀತಾಗಿದೆ. ಮಹಿಳೆಯರ ಚಾರಿತ್ರ್ಯ ಗಾಳಿಪಾಲಾಗುತ್ತಿದ್ದುದೇ ಆದರೆ, ಅದನ್ನು ಕಳೆದುಕೊಳ್ಳಲು ಸಿದ್ಧವಾಗಿರುವ ಮಹಿಳೆಯರು ತುದಿಗಾಲಲ್ಲಿ ನಿಂತಿದ್ದಾರೆಂಬುದು ವಸ್ತುಸ್ಥಿತಿಯಾಗದೇ, ಮಹಿಳೆಯರ ಶೀಲಹರಣ ಮಾಡಲು ಸನ್ನದ್ಧರಾಗಿ ನಿಂತಿರುವ ಪುರುಷರ ಶಕ್ತಿ, ಸಂಖ್ಯೆ ಹಾಗೂ ತಂತ್ರಗಳೇ ಅಧಿಕವಾಗಿವೆ ಎಂಬುದು ವಸ್ತುಸ್ಥಿತಿಯಾಗುತ್ತಿದೆ. ಆದರೆ ಹಿಂದುತ್ವವಾದಿಗಳು ವಸ್ತುಸ್ಥಿತಿಯತ್ತ ಕಣ್ಣುಚ್ಚಿ ಕೂಡುವಲ್ಲಿ ನಿಸ್ಸೀಮರು.

ಆರೆಸ್ಸೆಸ್ ದೇಹದಂಡನೆಯ ಶ್ರೇಷ್ಠತೆಯನ್ನು ಮೆರೆಯಲು ಸದಾ ಹಪಹಪಿಸುತ್ತದೆ. ಆದ್ದರಿಂದಲೇ ನಿಸರ್ಗನಿಯಮಕ್ಕೆ ವಿರುದ್ಧವಾದ ಹಲವು ನಿಬಂಧನೆಗಳನ್ನು ಅದು ಜಾರಿಗೊಳಿಸುತ್ತದೆ. ಹುಡುಗರಿಗಾಗಿ ಮಾತ್ರ ಶಾಖಾ ನಡೆಸುವುದು, ರಾಷ್ಟ್ರೀಯ ಸೇವಿಕಾ ಸಮಿತಿಯ ಸದಸ್ಯೆಯರಿಗೆ ಹಾಗೂ ರಾಷ್ಟ್ರೀಯಸ್ವಯಂಸೇವಕ ಸಂಘದ ಸದಸ್ಯರಿಗೆ ಜಂಟಿ ಶಿಬಿರಗಳನ್ನು ನಡೆಸದಿರುವುದು, ಸರಸಂಘಚಾಲಕರು ಅವಿವಾಹಿತರೇ ಆಗಿದ್ದು ಬ್ರಹ್ಮಚಾರಿಗಳಾಗಬೇಕೆಂದು ನಿಯಮ ಹೊಂದಿರುವುದು, ಬ್ರಹ್ಮಚಾರಿ ಪ್ರಚಾರಕರು ಹಾಗೂ ಪ್ರಚಾರಕಿಯರಿಗೆ ವಿಶೇಷ ಮನ್ನಣೆ ನೀಡುವುದು ಮುಂತಾದವು ನಿಸರ್ಗಸಹಜ ಆದರೆ ನಿರಪಾಯಕರ ಆಸೆಗಳನ್ನು ಅದುಮಿಡಲು ಬಯಸುವ ಆರೆಸ್ಸೆಸ್ ನೀತಿಗೆ ಉದಾಹರಣೆಗಳು. ಆಕ್ರಮಣಕಾರಿ ಪುರುಷ ಲೈಂಗಿಕತೆ ಹಾಗೂ ಕಠೋರ ಪೌರುಷ ಪ್ರದರ್ಶನಗಳ ಮೂಲಕ ತನ್ನ ಭೀಭತ್ಸತೆಯನ್ನು ಫ್ಯಾಸಿಸ್ಟರು ಹಾಗೂ ನಾಜಿಗಳು ಮೆರೆದಿದ್ದರೆ, ನಿಸರ್ಗನಿಯಮ ವಿರೋಧಿ ಬ್ರಾಹ್ಮಣಶಾಹಿ ಮೌಲ್ಯಗಳ ಶ್ರೇಷ್ಠತೆಯನ್ನು ಒಪ್ಪಿಕೊಂಡಿರುವ ಹಿಂದುತ್ವವಾದಿಗಳು ಪುರುಷ ಹಾಗೂ ಮಹಿಳೆ ಇಬ್ಬರ ಲೈಂಗಿಕ ಬದುಕನ್ನೂ ಮುಷ್ಠಿಯಲ್ಲಿ ಹಿಡಿದಿಟ್ಟುಕೊಳ್ಳಬಯಸುವ ಮೂಲಕ ತಮ್ಮ ಕ್ರೌರ್ಯರತಿಯನ್ನು ಪ್ರದರ್ಶಿಸುತ್ತಿದ್ದಾರೆ.

ಒಂದು ಅಭೂತಪೂರ್ವ ಹಾಗೂ ಹಿಂದುತ್ವದ ಹಿನ್ನಲೆಯಲ್ಲಿ ಊಹಿಸಲೂ ಸಾಧ್ಯವಾಗದ ಬದಲಾವಣೆಯೊಂದು ಕಾಣಿಸಿಕೊಂಡಿದೆ. ಹಿಂದೂ ಕೋಮುವಾದದ ಮಂಚೂಣಿಯಲ್ಲಿ ಕ್ರೌರ್ಯರತಿಯಲ್ಲಿ ನಿರತರಾದ ಪುರುಷರ ಜೊತೆ ಉದ್ರಿಕ್ತ ಮಹಿಳೆಯೂ ಬಂದು ನಿಂತಿದ್ದಾಳೆ. ಈ ವಿಲಕ್ಷಣ ಸನ್ನಿವೇಶವು ಖುದ್ದು ಹಿಂದುತ್ವವಾದಿ ಪುರುಷರನ್ನೂ ಕಂಗೆಡಿಸಿರಲು ಸಾಕು, ಯಾಕೆಂದರೆ ರಾಷ್ಟ್ರ ಸೇವಿಕಾ ದಳದ ಕಾರ್ಯವೈಖರಿಯ ಹಿಂದುತ್ವದ ತಾಳದ ಗತಿ ಮೀರಿದ ವೇಗದಲ್ಲಿ ಕುಣಿಯಲಾರಂಭಿಸಿದ್ದು ಸ್ವತಃ ಹಿಂದುತ್ವವಾದಿಗಳಿಗೇ ದಿಗ್ಭ್ರಮೆ ಮೂಡಿಸಿದೆ. ೧೯೮೯ರಲ್ಲಿ (ಭಾಗಲ್ಪುರ) ಕೋಮುದಂಗೆ ನಡೆದಾಗ ಹಿಂದುತ್ವವಾದಿ ಮಹಿಳೆ ಮನೆ ಒಳಗೇ ಉಳಿದಿದ್ದಳು, ೧೯೯೧ರಲ್ಲಿ (ಅಹಮದಾಬಾದ್) ಕೋಮುದಂಗೆ ಭುಗಿಲ್ಲೆಂದಾಗ ಹಿಂದುತ್ವವಾದಿ ಮಹಿಳೆ, ತನ್ನ ಸ್ವಾತಂತ್ರ್ಯ, ಶಕ್ತಿ-ಸಾಮರ್ಥ್ಯ ಮಾರುತಿ ಕಾರ್ ಓಡಿಸುವವರೆಗೆ ಮಾತ್ರ ಎಂದು ಗುರುತಿಸಿಕೊಂಡಿದ್ದಳು. ಆದರೆ ೧೯೯೧ರ ಅಂತ್ಯಾರ್ಧ ಹಾಗೂ ೧೯೯೨ರ ಕೋಮುದಂಗೆಗಳಲ್ಲಿ ಹಿಂದುತ್ವವಾದಿ ಮಹಿಳೆ ಹಿಂದುತ್ವವಾದಿ ಪುರುಷರ ಕ್ರೌರ್ಯರತಿಯನ್ನು ಸರಿಗಟ್ಟಿದ್ದಾಳೆ. ಅದು, ಇದುವವರೆಗೆ ಹಿಂದುತ್ವವಾದಿ

ಪುರುಷರಿಗೂ ಕಂಡಿರದ ಹಿಂದುತ್ವವಾದಿ ಮಹಿಳೆಯ ರೂಪವಾಗಿತ್ತು.

ಹೀಗಾಗಿಯೇ ಹಿಂದುತ್ವವಾದಿ ಮಹಿಳೆಯ ಕಾರ್ಯಕ್ಷೇತ್ರವೂ ಬದಲಾಗಿದೆ; ವಿಸ್ತಾರವಾಗುತ್ತಿದೆ. ದೆಹಲಿಯ ರಾಮಕೃಷ್ಣಪುರಂ ಕಚೇರಿಯಲ್ಲಿ ಫೆಬ್ರುವರಿಯಲ್ಲಿ ವಿ.ಎಚ್.ಪಿ ಅಂಕಿ ಅಂಶಗಳು ನಮಗೆ ತಿಳಿಸಿದ ಪ್ರಕಾರ, ೪ ಜನವರಿ೧೯೯೨ರಂದು ಅಯೋಧ್ಯೆಯಲ್ಲಿ ಇಪ್ಪತ್ತು ಸಾವಿರ ಮಹಿಳೆಯರು ಬಂಧನಕ್ಕೊಳಗಾಗಿದ್ದರು. ೧೯೯೧ರ ಡಿಸೆಂಬರ್-೧೯೯೨ ಜನವರಿಯಲ್ಲಿ ನಡೆದ ಸತ್ಯಾಗ್ರಹದಲ್ಲಿ ಒಟ್ಟು ಐವತ್ತು ಸಾವಿರಕ್ಕೂ ಹೆಚ್ಚು ಮಹಿಳೆಯರು ಪಾಲುಗೊಂಡಿದ್ದರು. ೧೫ ಡಿಸೆಂಬರ್ ೧೯೯೧ರ, ವಿಎಚ್‌ಪಿ ಮುಖವಾಣಿ 'ಹಿಂದೂ ಚೇತನಾ' ಪಾಕ್ಷಿಕ ಪತ್ರಿಕೆಯು ಮುಖಪುಟದಲ್ಲಿ ಹಗೆಗೆ ಕೇಸರಿಬಟ್ಟೆ ಕಟ್ಟಿಕೊಂಡ ಹಿಂದುತ್ವವಾದಿ ಮಹಿಳೆಯರ ಭಾವಚಿತ್ರ ಪ್ರಕಟಿಸಿದೆ. ಅದರ ಕೆಳಗೆ ಸ್ಫೋಟಗೊಂಡ ಮಹಿಳಾಶಕ್ತಿ ಎಂಬ ಅಡಿಬರಹವನ್ನು ನೀಡಲಾಗಿದೆ. ಹಿಂದುತ್ವ ರಕ್ಷಣೆಯಲ್ಲಿ ಬಲಿದಾನ ನೀಡಿದ ಪುರುಷರ ತಾಯಿ, ಪತ್ನಿ, ಸೋದರಿ, ಮಗಳು ಹೀಗೆ ಮಹಿಳಾ ಸಂಬಂಧಿಗಳು ಅಯೋಧ್ಯೆಯ ವಿಎಚ್‌ಪಿ ಕಚೇರಿಯಲ್ಲಿ "ಹಿಂದುತ್ವದ ರಕ್ಷಣೆಗಾಗಿ ತ್ಯಾಗ ಮಾಡಿದವರ" ಪಟ್ಟಿಯಲ್ಲಿ ಸೇರುತ್ತಿದ್ದಾರೆ. ಅವರನ್ನು ಗೌರವಿಸಲಾಗುತ್ತಿದೆ; ಪೂಜಿಸಲಾಗುತ್ತಿದೆ. "ಅಮರ ಶಹೀದ್" ಪತ್ರಿಕೆ "ಕಾಲ ಚಕ್ರ" ಹಾಗೂ "ನ್ಯೂಸ್ ಟ್ರ್ಯಾಕ್" ವಿಡಿಯೋ ಪತ್ರಿಕೆಗಳು ಹಿಂದುತ್ವವಾದಿ ಮಹಿಳೆಯರ ತ್ಯಾಗ, ಛಲ ಹಾಗೂ ಸಾಮರ್ಥ್ಯವನ್ನು ವೈಭವೀಕರಿಸಿವೆ. ದೆಹಲಿಯಲ್ಲಿ ವಿಎಚ್‌ಪಿ ಸಿಬ್ಬಂದಿ ನಮಗೆ ಬಿಜೆಪಿ ಸಂಸತ್ ಸದಸ್ಯೆ ಉಮಾ ಭಾರತಿಯ ಭಾಷಣ ಹೇಗೆ ಮೃದು ಮತ್ತು ವಿಎಚ್‌ಪಿ ಸನ್ಯಾಸಿನಿ ಋತಂಬರಾ ಭಾಷಣ ಹೇಗೆ ಆಕ್ರಮಣಕಾರಿಯಾಗಿದೆ ಎಂಬುದನ್ನು ಹೆಮ್ಮೆ - ಗೌರವಗಳಿಂದ ಹೇಳಿಕೊಂಡರು. ರಾಮಜನ್ಮಭೂಮಿ ವಿವಾದದ ಹಿನ್ನಲೆಯಲ್ಲಿ ಹಿಂದುತ್ವದ ಭಯಾನಕ ರೂಪವು ಒಂದೆಡೆ ಆಡ್ವಾಣಿ ಮತ್ತು ಅವರ ರಥಯಾತ್ರೆಯ ಮೂಲಕ ಕಾಣಿಸಿಕೊಂಡಿತು. ಅದೇ ಹಿಂದುತ್ವವು ಬುದ್ಧಿ ಸ್ವಾಧೀನವಿಲ್ಲದ ಮಹಿಳೆಯ ಕರ್ಣಕಠೋರ ಹಾಗೂ ಅಸಂಬದ್ಧ ಪ್ರಲಾಪವಾಗಿಯೂ ಕೇಳಿಸಿತು.

ಇದೆಲ್ಲ ದಿಢೀರನೆ ನಡೆದದ್ದಲ್ಲ. ಮಹಿಳೆಯರು ಹಾಗೂ ಪರಿಶಿಷ್ಟ ಜಾತಿಪಂಗಡಗಳ ಎರಡು ಸಮುದಾಯಗಳ ಮೇಲೆ ಬಿಜೆಪಿ ತನ್ನ ಗಮನವನ್ನು ಈಗ ಕೇಂದ್ರೀಕರಿಸಿದೆ. ಮಹಿಳೆಯರ ಮಧ್ಯೆ ಕೆಲಸ ಮಾಡಲು ಹಲವು ಪೂರ್ಣಾವಧಿ ಕಾರ್ಯಕರ್ತೆಯರು ನೇಮಕಗೊಂಡಿದ್ದರೆ, ಪರಿಶಿಷ್ಟ ಜಾತಿ/ಪಂಗಡಗಳಿಂದಲೇ ಕೆಲವರನ್ನು ಆಯ್ಕೆ ಮಾಡಿ, ಅವರಿಗೆ ತರಬೇತಿ ನೀಡಿ ಈ ಸಮುದಾಯಗಳ ಮಧ್ಯೆ ಬಿಜೆಪಿ ಬೀಜ ಬಿತ್ತುವ ಪ್ರಯತ್ನವೂ ನಡೆದಿದೆ. ಬಹುತೇಕ ಕೋಮುದಂಗೆಗಳಿಂದ ಘಾಸಿಗೊಳ್ಳುವವರು ವಿಶೇಷವಾಗಿ ಮಹಿಳೆಯರು; ಹಾಗಾಗಿ ಮಹಿಳಾ ಸಮುದಾಯವು ಸಾಮಾನ್ಯವಾಗಿ ಕೋಮುದಂಗೆ ಪ್ರಚೋದಿಸುವ ಹಿಂದೂ ಹಾಗೂ ಮುಸ್ಲಿಂ ಶಕ್ತಿಗಳನ್ನು ಅದು ಖಂಡಿಸುತ್ತದೆ. ಹಿಂದೂ ಕೋಮುವಾದಿ ಶಕ್ತಿಗಳು ಹಿಂದೂ ಸಮುದಾಯದೊಳಗೇ ಇರುವ ಜಾತಿ ಅಸಮಾನತೆಯನ್ನು ನಾಶಮಾಡುವ ಬಗ್ಗೆ ವಿಶೇಷ ಆಸ್ಥೆ ತೋರಿಸುವುದಿಲ್ಲವಾದ್ದರಿಂದ, ಪರಿಶಿಷ್ಟ ಜಾತಿ / ಪಂಗಡಗಳು ಅವರಿಗೆ ಹತ್ತಿರವಾಗುವುದು ದುಸ್ತರ; ಬಿ.ಜೆ.ಪಿ. ಕಾರ್ಯಶೈಲಿ ಹಾಗೂ ವಿಚಾರಧಾರೆಯ ಹಿನ್ನಲೆಯಲ್ಲಿ ಸಾಮಾನ್ಯವಾಗಿ ಮೂಡಿದ್ದ ಈ ಎರಡು ಪೂರ್ವಗ್ರಹಿಕೆಗಳು ಆಧಾರರಹಿತವಾದವು ಎಂದು ಸಾಬೀತುಪಡಿಸಲು ಬಿ.ಜೆ.ಪಿ ಹೊರಟಿರುವಂತಿದೆ.

ಹಿಂದೂ ಕೋಮುವಾದದ ಬೇರುಗಳು ಮುಖ್ಯವಾಗಿ ಉತ್ತರ ಪ್ರದೇಶದ ನಗರಪಟ್ಟಣಗಳಲ್ಲಿ ಇಳಿದಿವೆ; ಮೇಲ್ಜಾತಿ ಹಾಗೂ ಮಧ್ಯಮ ವರ್ಗಗಳ ಸಮುದಾಯವನ್ನು ಅದು ವಿಶೇಷವಾಗಿ ಸೆಳೆದುಕೊಂಡಿದೆ ಎಂಬುದು ನಿಜ. ಈ ಸಂಗತಿಯನ್ನು ವಿ.ಎಚ್.ಪಿ ಕಾರ್ಯಕರ್ತರೂ ಒಪ್ಪುತ್ತಾರೆ. ಆದಾಗ್ಯೂ ಹಿಂದೂ ಕೋಮುವಾದ ಹಬ್ಬುತ್ತಿರುವ ವೇಗವನ್ನು ಮಾತ್ರ ಅಲಕ್ಷಿಸುವಂತಿಲ್ಲ. ಅಯೋಧ್ಯೆ ವಿವಾದದಲ್ಲಿ ಕರಸೇವೆ ನಡೆದಾಗ ಅಲ್ಲಿಗೆ ಹೋಗಿದ್ದ ಕರಸೇವಕಿಯರು ಸಾಂಪ್ರದಾಯಿಕವಾಗಿ ಸನಾತನವಾದಿ ವರ್ಗ ಎಂದು ಯಾವುದನ್ನು ಗುರುತಿಸಲಾಗುತ್ತದೆಯೋ, ಮುಖ್ಯವಾಗಿ ಅಲ್ಲಿಂದ ಬಂದವರು. ಅವರು ಮೇಲ್ವರ್ಗದವರಾಗಿದ್ದರು; ಮಧ್ಯಮ ದರ್ಜೆಯ ಸೇವಾಕ್ಷೇತ್ರಗಳಲ್ಲಿ ಉದ್ಯೋಗದಲ್ಲಿದ್ದವರು ಹಾಗೂ ವ್ಯಾಪಾರಿ ವೃತ್ತಿಯ ಕುಟುಂಬಗಳವರಾಗಿದ್ದರು. ಅವರನ್ನು ಹಿಂದೂ ಕೋಮುವಾದಿ ಪುರುಷರು ಸಮ್ಮೋಹನಗೊಳಿಸಿ, ತಮ್ಮ ಕಾರ್ಯಸಾಧನೆಗೆ ಕಳಿಸಿದ್ದರು ಎಂದು ನಾವು ಹುಸಿ ಸಮಾಧಾನದ ಮೊರೆ ಹೋಗುವುದೂ ತಪ್ಪಾಗುತ್ತದೆ.

ಯಾಕೆಂದರೆ ಅಯೋಧ್ಯೆಯಲ್ಲಿ ನಾವು ಕೆಲವು ಪುರುಷ ಸತ್ಯಾಗ್ರಹಿಗಳೊಂದಿಗೆ ಮಾತಾಡುತ್ತಿದ್ದಾಗ, ಅವರು ಕೆಲವು ಐತಿಹಾಸಿಕ ಹಾಗೂ ಪ್ರಾಚೀನ ಶೋಧಕ ಅಂಶಗಳನ್ನು ಪ್ರಸ್ತಾಪಿಸಿದರು. ಹಾಗೆಯೇ ಅವರು ಭಾರತ ಕುರಿತ ಆರೆಸ್ಸೆಸ್ ನ ಅಧಿಕೃತ ವ್ಯಾಖ್ಯೆ "ಪಿತೃಭೂಮಿ, ಮಾತೃಭೂಮಿ, ಪುಣ್ಯಭೂಮಿ ಹಾಗೂ ಕರ್ಮಭೂಮಿ"

ಎಂಬುದನ್ನು ಪುನರುಚ್ಚರಿಸಿದರು. ಆಗ ಅಲೀಗಢದಿಂದ ಬಂದಿದ್ದ ಚಂದ್ರಾವತಿ ಎಂಬ ಮಹಿಳಾ ಸತ್ಯಾಗ್ರಹಿ ಮಧ್ಯೆ ಪ್ರವೇಶಿಸಿ "(ಹೀಗೆಂದು ತಿಳಿಯದವರ) ರಕ್ತ ಹರಿಸಲು ನಾವು ಬಂದಿದ್ದೇವೆ. ಮಂದಿರ ನಿರ್ಮಾಣದ ಅರ್ಥವೆಂದರೆ ಮುಲ್ಲಾಗಳನ್ನು ಫಾಸಿ ಶಿಕ್ಷೆಗೆ ಗುರಿಪಡಿಸುವುದು; ಮೊದಲ ಫಾಸಿ ಮುಲಾಯಂ(ಸಿಂಗ್ ಯಾದವ್-ಉತ್ತರ ಪ್ರದೇಶದ ಆಗಿನ ಮುಖ್ಯಮಂತ್ರಿ) ಹಾಗೂ ವಿ.ಪಿ. (ವಿಶ್ವನಾಥ ಪ್ರತಾಪ ಸಿಂಗ್-ಭಾರತದ ಆಗಿನ ಪ್ರಧಾನಿ)" ಎಂದು ಆವೇಶಭರಿತಳಾಗಿ ಹೂಂಕಾರ ಹಾಕಿದಳು. ಅನಂತರ ನಮ್ಮ ಚರ್ಚೆಯಲ್ಲಿ ಆವೇಶದ ಹಾವಳಿಯೇ ಜಾಸ್ತಿಯಾಗಿತ್ತು.

ಮೇಲಿನ ಸಂದರ್ಭದಲ್ಲಿ ಮಹಿಳಾ ಕಾರ್ಯಕರ್ತೆ ಕೇವಲ ಆವೇಶದಿಂದ ಕಿರುಚಿದಳು ಎಂದು ತೀರ್ಮಾನಿಸಿ ಬಿಡುವುದೂ ಸರಿಯಾಗಲಾರದು. ಯಾಕೆಂದರೆ, ಆವೇಶ ಇದ್ದರೂ, ಈ ಕಾರ್ಯಕರ್ತೆಯರು ರಾಮಜನ್ಮ ಭೂಮಿ ವಿವಾದ ಹಾಗೂ ಹಿಂದುತ್ವ ಕುರಿತಂತೆ ನಿಖರವಾದ ಒಂದು ತಿಳುವಳಿಕೆಯ ಹಿನ್ನಲೆಯಲ್ಲಿ ಒಂದು ಸ್ಪಷ್ಟ ತೀರ್ಮಾನಕ್ಕೆ ಬಂದಿದ್ದರು. ಸನ್ಯಾಸಿನಿ ದೀಕ್ಷೆ ತೆಗೆದುಕೊಳ್ಳಲು ನಿರ್ಧರಿಸಿದ್ದ ಗಾಜಿಯಾಬಾದ್‌ನ ವಿಜಯಾ ದುಬೆ ಎಂಬ ಮಹಿಳೆ "ಈ ಹಿಂದುಸ್ಥಾನವು ಸಮುದ್ರದ ಹಾಗೆ ಗಂಭೀರವಾದುದು, ಆಕಾಶದ ಹಾಗೆ ವಿಸ್ತಾರವಾದುದು, ಇಲ್ಲಿ ಹಿಂದೂನೇ ಆದಿ ಮತ್ತು ಹಿಂದೂನೇ ಅಂತ್ಯ" ಎಂದು ಹೇಳಿದಳು. ಹಿಂದೂ ಧರ್ಮ ಸಾರ್ವಕಾಲಿಕವಾದುದು ಎಂದೂ ಆಕೆ ಒತ್ತಿ ಹೇಳಿದಳು. ಹಿಂದೂ ಎಂಬುದು ಒಂದು ಸಮಷ್ಟಿಯ ಅಪೂರ್ವ ಅನುಭವ ಎಂದೇ ಆಕೆ ವ್ಯಾಖ್ಯಾನಿಸಿದಳು. ರಾಮಜನ್ಮ ಭೂಮಿ ಪ್ರಸ್ತಾಪ ಬಂದಾಗ, ಆಕೆ "ಅದು ನಮ್ಮ ಸರ್ವಸ್ವ; ಅದು ಕೇವಲ ಧಾರ್ಮಿಕ ನಂಬಿಕೆಯಲ್ಲ" ಎಂದೇ ಆಗ್ರಹಪಡಿಸಿದಳು. ಅಯೋಧ್ಯೆಯಲ್ಲಿ ರಾಮಮಂದಿರ ನಿರ್ಮಾಣವಾದರೆ "ಪೂರ್ತಿ ವಿಶ್ವವು ಬದಲಾಗುವುದು; ಹೊಸ ಸೃಷ್ಟಿಯು ಜೀವತಳೆಯುವುದು" ಎಂದು ಭರವಸೆ ನೀಡಿದಳು.

ಆದರೆ ಮೋದಿನಗರದ ವಿಎಚ್‌ಪಿ ಕಾರ್ಯಕರ್ತ ಮಿಥಿಲೇಶ್ ವಶಿಷ್ಠ ಎಂಬ ಯುವಕನ ಪ್ರಕಾರ, ಅಯೋಧ್ಯೆ ವಿವಾದ ಕುರಿತ ಹಿಂದೂ ಸಮುದಾಯದ ಆಂದೋಲನವು ತನಗೆ ಅನ್ಯಾಯ ಹಾಗೂ ದಬ್ಬಾಳಿಕೆ ವಿರುದ್ಧ ಸ್ವಾಭಿಮಾನದಿಂದ ಹೋರಾಟ ನಡೆಸುವುದನ್ನು ಕಲಿಸಿದೆ, ಎಂದು ಹೇಳಿ "ಎಲ್ಲಕ್ಕೂ ಒಂದು ಮಿತಿಯಿರುತ್ತದೆ; ದಬ್ಬಾಳಿಕೆಯನ್ನು ಇನ್ನು ಕ್ಷಣ ಕಾಲ ಕೂಡ ಸಹಿಸುವುದಿಲ್ಲ" ಎಂದೂ ಕೋಪ ತಾಳಿದ. ಇನ್ನೊಬ್ಬ ಮಹಿಳೆ "(ಈ ಆಂದೋಲನವು) ನಮ್ಮ ಬದುಕಿನ ಭಾಗವಾಗಿದೆ; ಅದು ನಮಗೆ ಆಭೂಷಣವೂ ಹೌದು. ಕೃಷ್ಣ ಪರಮಾತ್ಮನಿಗೆ ಸುದರ್ಶನ ಚಕ್ರವಿದ್ದ ಹಾಗೆ" ಎಂದು ಕಾವ್ಯಮಯ ಉಪಮೆಯನ್ನೂ ನೀಡಿದಳು. ಆಗ ನಮ್ಮೊಂದಿಗೆ ಮಾತಾಡಿದ ಎಲ್ಲಾ ಮಹಿಳೆಯರು ನಿರರ್ಗಳವಾಗಿ ಮಾತಾಡಬಲ್ಲವರಾಗಿದ್ದರು; ತಮ್ಮದೇ ವಾದ ಮಂಡಿಸುತ್ತಿದ್ದರು. ಅವರ ವಾದಶೈಲಿ ಭಿನ್ನವಾಗಿತ್ತು. ಅವರೆಲ್ಲರ ತೀರ್ಮಾನಗಳೂ ಹಿಂದುತ್ವಕ್ಕೆ ಪೂರ್ಣವಾಗಿ ಬದ್ಧವಾಗಿದ್ದವು. ಈ ಮುಂಚಿನ ಕೋಮುದಂಗೆಗಳಲ್ಲಿಲ್ಲದ ಒಂದು ಅವಕಾಶವು-ತಮ್ಮಲ್ಲಿನ ರಾಜಕೀಯ ಕ್ರಿಯಾಶಕ್ತಿಯನ್ನು ವ್ಯಕ್ತಪಡಿಸುವ ಮಹಿಳೆಯರ ಸಾಮರ್ಥ್ಯ-ರಾಮಜನ್ಮ ಭೂಮಿ ವಿವಾದದ ಬೆಳವಣಿಗೆ ರೂಪದಲ್ಲಿ ಲಭ್ಯವಾಗಿತ್ತು.

ಈಗಿನ ಚಳವಳಿಗೂ ಹಾಗೂ ಈ ಮುಂಚಿನ ರಾಷ್ಟ್ರೀಯ ಹಾಗೂ ಕೋಮುವಾದಿ ಚಳವಳಿಗಳಿಗೂ ಇದ್ದ ಇನ್ನೊಂದು ವ್ಯತ್ಯಾಸವೆಂದರೆ ಗುರಿಯಲ್ಲಿನ ಸಾಂಕೇತಿಕತೆ. ಈ ಹಿಂದೆಲ್ಲ-ಹಸು, ಒತ್ತೆಯಾಳಾಗಿದ್ದ ಹಿಂದೂ ಮಹಿಳೆ, ತಾಯ್ನಾಡು-ಹೀಗೆ ಮಹಿಳೆಯರನ್ನು ಸಂಕೇತಿಸುವಂಥದ್ದು ಗುರಿಯಾಗಿತ್ತು. ಈಗ ಪುರುಷನಾಗಿದ್ದ ರಾಮ ಕೇಂದ್ರ ಬಿಂದುವಾಗಿದ್ದ. ಶ್ರೀರಾಮನ ಕಳೆದುಹೋದ ಮರ್ಯಾದೆಯನ್ನು, ಸ್ಥಾನವನ್ನು ಹಿಂತಿರುಗಿಸಿ ಕೊಡಲು ಮಹಿಳಾಪಡೆ ಸಿದ್ಧಗೊಳ್ಳುತ್ತಿತ್ತು. ರಾಮಚಂದ್ರ ತನಗೊಂದು ನೆಲೆ ಕಂಡುಕೊಳ್ಳಲು ತನ್ನ ವಾನರ ಸೇನೆ ಮತ್ತು ಅಳಿಲುಗಳಿಂದ ಅಷ್ಟೇ ಅಲ್ಲದೆ ಸೀತೆಯನ್ನು ಪ್ರತಿನಿಧಿಸುವ ಸ್ತ್ರೀತ್ವದ ಸಹಾಯವನ್ನೂ ಕೇಳುವ ಸ್ಥಿತಿಯಲ್ಲಿದ್ದ. ನೆಲೆ ಕಳೆದುಕೊಂಡಿದ್ದ ಸೀತೆಗೆ ಗೌರವದ ಸ್ಥಾನ ದೊರಕಿಸಿಕೊಡಲು ಅಂದು ರಾಮಚಂದ್ರ ವಾನರ ಸೇನೆಯೊಂದಿಗೆ ಆಕ್ರಮಣಕ್ಕೆ ಸಿದ್ಧನಾಗಿ ನಡೆದಿದ್ದ; ಇಂದು ಸ್ಥಿತಿ ಹಿಂದು-ಮುಂದಾಗಿತ್ತು. ರಾಮಚಂದ್ರನಿಗೆ ಒಂದು ನೆಲೆ ಮಾಡಿಕೊಡಲು ಈಗ ಸೀತೆಯನ್ನು ಪ್ರತಿನಿಧಿಸುವ ಮಹಿಳಾ ಶಕ್ತಿ ಈಗ ಮುಂಚೂಣಿಯಲ್ಲಿ ಬಂದು ನಿಂತಿದೆ. ಹಿಂದೂ ಕೋಮುವಾದವು ಮಹಿಳಾ ಸಮುದಾಯದೊಳಗೇ ಒಂದು ಬಣವನ್ನು ತನ್ನ ಪರಂಪರಾಗತ ಲಕ್ಷ್ಮಣರೇಖೆಯನ್ನು ಉಲ್ಲಂಘಿಸುವಂತೆ ಪ್ರೇರೇಪಿಸುವಲ್ಲಿ ಯಶಸ್ವಿಯಾಗಿದೆ. ಈ ಬಣ ಈಗ ತನ್ನ ಉಗ್ರರೂಪದಲ್ಲಿ ಕ್ರಿಯಾಶೀಲವಾಗಿದೆ.

ಜಿ. ರಾಜಶೇಖರ, ಕೆ. ಫಣಿರಾಜ ಮತ್ತು
ಫಕೀರ್ ಮಹಮದ್ ಕಟ್ಪಾಡಿ ಯವರ
"ಕೋಮುವಾದದ ರಾಜಕೀಯ"
ಪುಸ್ತಕದ ಆಯ್ದ ಭಾಗ

# "ಹೇ ರಾಮ್" - ಗಾಂಧಿಯ ನಾಡಿನಲ್ಲಿ ನಡೆದ ನರಮೇಧ



"ಹೇ ರಾಮ್" ಗಾಂಧಿಯ ನಾಡಿನಲ್ಲಿ ನಡೆದ ನರಮೇಧ ಎಂಬ ಡಾಕ್ಯುಮೆಂಟರಿ ಚಿತ್ರವು ಗುಜರಾತಿನ ಸಂಘ ಪರಿವಾರವು ಯೋಜಿಸಿ, ವ್ಯವಸ್ಥಿತವಾಗಿ ನಡೆಸಿದ ಮುಸ್ಲಿಂರ ನರಮೇಧವನ್ನು ಹಿಡಿದಿಟ್ಟಿದೆ. ದೆಹಲಿಯ ಗೋಪಾಲ್ ಮೆನನ್‌ರವರು ಈ ಸಿನಿಮಾವನ್ನು ಮಾಡಿದ್ದಾರೆ. ಅತ್ಯಂತ ಕಡಿಮೆ ಖರ್ಚಿನಲ್ಲಿ ಮಾಡಿರುವ ಈ ಸಿನಿಮಾ ಯಾರಿಗಾದರೂ ಸಂಕಟ ಹುಟ್ಟಿಸುವಂತಹುದು. ಒಬ್ಬ ಪುಟ್ಟ ಹುಡುಗನೊಬ್ಬನು ತನ್ನ ಕಣ್ಣೆದುರಿನಲ್ಲಿಯೇ ತನ್ನ ತಂದೆ ತಾಯಿಗಳ ಬರ್ಬರ ಹತ್ಯೆಯನ್ನು ಕಂಡದ್ದನ್ನು ಹೇಳುವುದನ್ನು, ಹದಿಹರಯದ ಹುಡುಗಿಯು ತನ್ನ ಇಡೀ ಕುಟುಂಬ ತನ್ನಿದಿರೇ ಕೊಲೆಯಾದುದನ್ನು ಹೇಳುವುದು, ಮುದುಕಿಯೊಬ್ಬಳು ಕಾಣೆಯಾಗಿರುವ ತನ್ನ ಮಗನನ್ನು ಕುರಿತು ಮತ್ತು ತನ್ನ ತಂಗಿಯೋರ್ವಳನ್ನು ದಾರುಣವಾಗಿ ಅತ್ಯಾಚಾರವೆಸಗಿ ಆಕೆಯನ್ನು ತನ್ನ ಕಣ್ಣುಮುಂದೆ ಸುಟ್ಟು ಹಾಕಿದ್ದನ್ನು ಅವರು ಹೇಳುತ್ತಿದ್ದರೆ ಅದನ್ನು ನೋಡುವ ನಮಗೆ ಬಹಳ ಸಂಕಟವಾಗುತ್ತಿತ್ತು. ಇಡೀ ಸಮುದಾಯವೇ ರಾತ್ರೋರಾತ್ರಿ ಅಸಹಾಯಕತೆಯಲ್ಲಿ ಮುಳುಗಿ ಹೋದುದನ್ನು ನೋಡುವುದು ದಾರುಣವಾಗಿತ್ತು.

ಸಿನಿಮಾವನ್ನು ನೋಡುತ್ತಿದ್ದಂತೆ ನಮ್ಮಲ್ಲಿ ನಾವು ಕಲ್ಪಿಸಿಕೊಳ್ಳುವುದೇನೆಂದರೆ- ತಾನು ನೋಡಿದ ಭೀಕರ ಘಟನೆಯನ್ನು ಪುಟ್ಟ ಹುಡುಗ ಹೇಗೆ ಮರೆಯಬಲ್ಲ? 70 ವರ್ಷದ ಮುದುಕ ತನ್ನ ಇಡೀ ಜೀವಮಾನ ದುಡಿದಿದ್ದನ್ನು ಸಂಪೂರ್ಣವಾಗಿ ಕಳಕೊಂಡಿದ್ದು ಮತ್ತೆ ಪಡೆದುಕೊಳ್ಳಬಲ್ಲನೇ? ಕುರಿ ಮಂದೆಗಳ ದೊಡ್ಡಿಯಂತೆ ಕಾಣುವ ಕ್ಯಾಂಪಿನಲ್ಲಿ ಕಾಲ ಕಳೆಯುತ್ತಿರುವ ಇವರಿಗೆ ತಮ್ಮ ಆಪ್ತರನ್ನು ಕೊಂದು ಹಾಕಿದವರು, ತಮ್ಮ ಮನೆ ಅಂಗಡಿ ಮುಟ್ಟುಗಳನ್ನು ನಿರ್ನಾಮಗೊಳಿಸಿದವರು ಸ್ಥಳೀಯ ಆಡಳಿತಗಾರರೇ ಎಂದು ಚೆನ್ನಾಗಿ ತಿಳಿದಿದೆ. ಈ ಅಸಹಾಯಕ ಜನರು ಇಂತಹ ಘೋರ ಆಘಾತದಿಂದ ಹೊರಬರಲಾದೀತೆ? ಇವರ ಮುಂದಿರುವ ಭವಿಷ್ಯ ಎಂತಹುದು?

ತನ್ನ ಮಗ ತನಗೆ ಬೇಕು ಎಂದು ಮಹಿಳೆಯೊಬ್ಬಳು ರೋದಿಸುತ್ತಾಳೆ, ಆಕೆಗೆ ಪರಿಹಾರ ಆಶ್ವಾಸನೆಯ ಮಾತು ಬೇಕಿಲ್ಲ. ಅವಳ ಮಡಿಲಿಗೆ ಅವಳ ಮಗ ಹಿಂದಿರುಗಿ ಬರಬೇಕು. ಗಲಭೆ ಕೋರರು ಚೂರಿಯಿಂದ ಇರಿದಾಗ ಅವನು ಕುಸಿದು ಬಿದ್ದಿದ್ದನ್ನು ನೋಡಿಯೂ ಅವನ ಸಹಾಯಕ್ಕೆ ಹೋಗಲಿಲ್ಲ, ಯಾಕೆಂದರೆ ಶಸ್ತ್ರ ಸಜ್ಜಿತ ದಂಗೆ ಕೋರರು ಆಕೆಯನ್ನು ಮತ್ತು ಕುಟುಂಬದವರನ್ನು ಅಟ್ಟಿಸಿಕೊಂಡು ಹೋಗಿ ಆಕ್ರಮಣ ಮಾಡಿತು. ಆಕೆಯ ಸಹೋದರ ಪೋಲೀಸಿಗೆ ಸುದ್ದಿ ಮುಟ್ಟಿಸಿದ. ಪೋಲೀಸರು ಹುಡುಗ ಚನ್ನಾಗಿದ್ದಾನೆ, ಅವನನ್ನು ಚಿಕಿತ್ಸೆಗೆಂದು ಸಮೀಪದ ಆಸ್ಪತ್ರೆಗೆ ಕೊಂಡಯ್ಯಲಾಗಿದೆ ಎಂದು ಆಶ್ವಾಸನೆ ನೀಡಿದರು. ಆದರೆ ಆಕೆ ಮತ್ತೆಂದೂ ಮಗನನ್ನು ನೋಡಲೇ ಇಲ್ಲ.

ಒಂದಕ್ಕಿಂತ ಒಂದು ಹೃದಯ ವಿದ್ರಾವಕ ಘಟನೆಗಳು....ಈ ಎಲ್ಲಾ ಗಲಭೆಗಳನ್ನು ಸ್ಥಳೀಯ ರಾಜಕಾರಣಿಗಳು ಯೋಜಿಸಿ ಸೂಚನೆ ನೀಡಿ ಮಾಡಿಸಿದ್ದಾರೆ ಎಂದು ಈ ನರಮೇಧಕ್ಕೆ ಒಳಗಾಗಿ ಅಳಿದುಳಿದ ಜನ ಸರ್ವೇ ಸಾಮಾನ್ಯವಾಗಿ ಅಭಿಪ್ರಾಯ ಪಡುತ್ತಾರೆ. ಹಲವಾರು ಬಡಾವಣೆಗಳಲ್ಲಿ ತಲಾ ರೂ 500 ರಂತೆ ಹಂಚಿ ಮತ್ತು ಹೆಂಡದ ಹೊಳೆಹರಿಸಿ ಗುಂಪುಗಳನ್ನು ಗಲಭೆ ಮಾಡಲು ತಯಾರು ಮಾಡಲಾಗಿತ್ತು. ಗ್ಯಾಸ್ ಸಿಲಿಂಡರ್‌ಗಳನ್ನು ಬಳಸಿ ಮನೆಗಳನ್ನು ಸುಡಲಾಯಿತು. ಚಾಕು, ಕತ್ತಿ, ಲಾಠಿ, ಚೈನು ಮತ್ತು ತ್ರಿಶೂಲಗಳನ್ನು ನರಮೇಧಕ್ಕೆ ಬಳಸಲಾಗಿತ್ತು. ಗುಂಪು ಗಲಭೆಕೋರರಿಂದ ಅಕಸ್ಮಾತ್ ತಪ್ಪಿಸಿಕೊಂಡು ಜೀವವನ್ನು ಉಳಿಸಿಕೊಳ್ಳಲು ಓಡಿ ಹೋಗುತ್ತಿದ್ದ ಈ ಅಸಹಾಯಕ ಜನರಿಗೆ ರಕ್ಷಣೆ ನೀಡಿ ಆ ಪುಂಡರ ಮೇಲೆ

ಗುಂಡು ಹಾರಿಸುವ ಬದಲು ಈ ಅಸಹಾಯಕ ಜನರ ಮೇಲೆ ಪೊಲೀಸರು ಗುಂಡು ಹಾರಿಸುತ್ತಿದ್ದರು.

ಫ್ಯಾಸಿಸಮ್‌ನ ನಿಜವಾದ ಮುಖವನ್ನು ತೋರುವ ಈ ಸಿನಿಮಾವನ್ನು ನೊಡಲೇ ಬೇಕು. ಇದನ್ನು ನೋಡುತ್ತಾ ಹೋಗುತ್ತಿದ್ದಂತೆ ಗುಜರಾತಿನಲ್ಲಿ ನಡೆದ ರಕ್ತಪಾತಕ್ಕೆ ನಾವು ಒಂದಲ್ಲ ಒಂದು ರೀತಿಯಲ್ಲಿ ಜವಾಬ್ದಾರರೇನೋ ಎನ್ನುವಂತೆ ಮಾಡುತ್ತದೆ. ಅಪಾಯಕಾರಿ ಕೋಮುವಾದವು ಈ ಹಂತಕ್ಕೆ ಬೆಳೆಯಲು ನಾವು ಮೌನವಾಗಿರುವುದೇ ಕಾರಣ ಅಥವಾ ವ್ಯವಸ್ಥಿತವಾಗಿ, ಅಚ್ಚುಕಟ್ಟಾಗಿ ಯೋಜಿಸಿ ನಡೆಸಿದ ನರಮೇಧಕ್ಕೆಕೊಂಚ ಕೊಸರಾಡುವುದನ್ನು ಬಿಟ್ಟರೆ ಕೋಮುವಾದವನ್ನು ಹತ್ತಿಕ್ಕುವ ಪ್ರಯತ್ನ ಗಂಭೀರವಾಗಿ ನಡೆಸದೆ ಇರುವುದರಿಂದ ಗುಜರಾತ್‌ನ ನರಮೇಧ ಜಾತ್ಯಾತೀತ ಭಾರತಕ್ಕೆ ಹಿಂದೂ ರಾಷ್ಟ್ರವೆಂಬ ಕುಖ್ಯಾತಿಯನ್ನು ತಂದಿದೆ.

ಒಂದು ಒಳ್ಳೆಯ ಸುದ್ದಿ ಎಂದರೆ ಸಿನಿಮಾವನ್ನು ಹಲವಾರು ಕಡೆ ಪ್ರದರ್ಶಿಸಲಾಗಿದೆ. ಪಂಜಾಬಿನ ಜಲಿಯನ್ ವಾಲಾ ಬಾಗ್‌ನಲ್ಲಿ ಸುಮಾರು 7000 ಕ್ಕಿಂತ ಹೆಚ್ಚು ಜನರು ಇದನ್ನು ನೋಡಿದ್ದಾರೆ. ಸ್ಥಳಾವಕಾಶವಿಲ್ಲದ್ದರಿಂದ ಅನೇಕ ಜನರನ್ನು ವಾಪಸ್ಸು ಕಳಿಸಿ ಮತ್ತೆ ಮರುದಿನ ಬರಲು ಹೇಳಿ ಎರಡನೇ ಪ್ರದರ್ಶನ ಏರ್ಪಡಿಸಲಾಗಿತ್ತು. ಗುಜರಾತಿನ ನರಮೇಧದ ನಂತರ ಅಹಮದಾಬಾದ್ ಮತ್ತು ಗುಜರಾತಿನ ಇತರ ಭಾಗದಲ್ಲಿರುವ 50 ಸಂಘಟನೆಗಳ ಒಕ್ಕೂಟವು ಪ್ರಾರಂಭವಾಗಿದ್ದು ಹಲವಾರು ಕಡೆ ಪ್ರದರ್ಶನಗಳನ್ನು ಆಯೋಜಿಸಿದೆ. ಗುಜರಾತಿನ ನರಮೇಧದ ಕುರಿತು ಬೆಂಗಳೂರಿನಲ್ಲಿ ನಡೆದ ಸಾರ್ವಜನಿಕ ಸಭೆಯಲ್ಲಿ ಈ ಸಿನಿಮಾವನ್ನು ನೋಡಿದವರೆಲ್ಲರೂ ಹಲವಾರು ಘಳಿಗೆ ಮೌನವಾಗಿ ಕುಳಿತರು. ಮಾತನಾಡಲು ಹೋದವರೆಲ್ಲ ದುಃಖ ತಡೆಯಲಾಗದೆ ಸುಮ್ಮನಾದರು.

ಗುಜರಾತಿನ ನೆನಪು ಮಾಸದಿರಲು ಮತ್ತು ಗುಜರಾತ್ ಘಟನೆ ಮತ್ತೆ ಮರುಕಳಿಸದಿರಲು ಹೆಚ್ಚು ಹೆಚ್ಚು ಜನರು ಈ ಸಿನಿಮಾ ನೋಡಬೇಕು.

## ಕೋಮು ಸೌಹಾರ್ದದ ಕಾರ್ಯಕ್ರಮಗಳ ವರದಿ

ಫೆಬ್ರವರಿ 27 ರಂದು ಅಯೋಧ್ಯೆಯಿಂದ ಹಿಂತಿರುಗುತ್ತಿದ್ದ 55 ಜನ ಕರಸೇವಕರು ಮತ್ತು ಸಾಮಾನ್ಯ ಪ್ರಯಾಣಿಕರನ್ನು ಗುಜರಾತಿನ ಗೋದ್ರಾ ರೈಲ್ವೆ ನಿಲ್ದಾಣದಲ್ಲಿ ಜೀವಂತವಾಗಿ ದಹಿಸಲಾಯಿತು. ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಹಿಂಸಾಚಾರ ಜರುಗಬಹುದೆಂಬುದು ಎಲ್ಲರೂ ಊಹಿಸಬಹುದಾದ ವಿಷಯ. ಆದರೆ ಇಂತಹ ಸಂದರ್ಭದಲ್ಲಿಯೂ ಗುಜರಾತ್ ಸರ್ಕಾರ ಕಣ್ಣು ಮುಚ್ಚಿ ಕುಳಿತಿತ್ತು. ಈ ಕೋಮುದಳ್ಳುರಿಯಲ್ಲಿ ಪ್ರಾಣತೆತ್ತವರು ಎಲ್ಲ ಧರ್ಮದ ಬಡವರು ಮತ್ತು ದಲಿತರು, ಎಂಬುದು ಗಮನಾರ್ಹ ಅಂಶ. ಗಲಭೆಗಳಲ್ಲಿ ಲೂಟಿಕೋರರ, ಅತ್ಯಾಚಾರಿಗಳ, ಕೊಲೆಗಡುಕರ ಕ್ರೌರ್ಯಕ್ಕೆ ಬಲಿಯಾಗುವವರು, ಅಮಾನುಷ ದೌರ್ಜನ್ಯಕ್ಕೊಳಗಾಗುವವರು ವಿಶೇಷವಾಗಿ ಮಹಿಳೆಯರು ಮತ್ತು ಮುಗ್ಧ ಕಂದಮ್ಮಗಳು.

ಕೋಮುದಳ್ಳುರಿಯಲ್ಲೂ ಜಾತ್ಯಾತೀತತೆ ಈಗಲೂ ಜೀವಂತವಾಗಿ ಇದೆ, ಎಂಬುದಕ್ಕೆ ಬೆಂಗಳೂರಿನಲ್ಲಿ ಅನೇಕ ಮಹಿಳಾ ಸಂಘಟನೆಗಳು, ಮಾನವ ಹಕ್ಕುಗಳ ಸಂಘಟನೆಗಳು, ಸರ್ಕಾರೇತರ ಸಂಘ-ಸಂಸ್ಥೆಗಳು ಹಾಗೂ ಇತರೆ ಸಾಮಾಜಿಕ ಕಾರ್ಯಕರ್ತರು ಕೋಮುವಾದವನ್ನು ವಿರೋಧಿಸಿ ಬೆಂಗಳೂರಿನಲ್ಲಿ ಅನೇಕ ಧರಣಿ, ರ್‍ಯಾಲಿಗಳನ್ನು ಹಮ್ಮಿಕೊಂಡಿದ್ದರು. ಈ ಕಾರ್ಯಕ್ರಮಗಳ ಒಂದು ವರದಿಯನ್ನು ಮಾನಸದ ಓದುಗರಿಗಾಗಿ ಪ್ರಕಟಿಸುತ್ತಿದ್ದೇವೆ.

### ಧರ್ಮದ ಹೆಸರಿನಲ್ಲಿ ಹತ್ಯಾಕಾಂಡ ನಿಲ್ಲಿಸಿ

ಮಾರ್ಚ್ 8, 2002 ರಿಂದ ಮಾರ್ಚ್ 14, 2002 ರವರೆಗೆ ಬೆಂಗಳೂರಿನಲ್ಲಿರುವ ಅನೇಕ ಮಹಿಳಾ, ಮಾನವ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿರುವ ಸಂಘಟನೆಗಳು

ಸರ್ಕಾರೇತರ ಸಂಸ್ಥೆಗಳು, ಲೈಂಗಿಕ ಅಲ್ಪಸಂಖ್ಯಾತರ ಹಕ್ಕುಗಳಿಗಾಗಿ ಕೆಲಸ ಮಾಡುತ್ತಿರುವ ಸಂಸ್ಥೆಗಳು ಕಾರ್ಪೊರೇಷನ್ ಸರ್ಕಲ್‌ನಲ್ಲಿ ಗುಜರಾತಿನ ನರಮೇದವನ್ನು ವಿರೋಧಿಸಿ ಧರಣಿ ನಡೆಸಿದರು. ಪ್ರತಿ ದಿನ ಬೆಳಿಗ್ಗೆ 10-00 ರಿಂದ 7-30 ರವರೆಗೆ ಧರಣಿ ಸತ್ಯಾಗ್ರಹವನ್ನು ನಡೆಸಲಾಗುತ್ತಿತ್ತು. ಧರಣಿಯಲ್ಲಿ ನಿತ್ಯವೂ ಕೋಮು ಸೌಹಾರ್ದದ, ಸಮಾನತೆಯ ಹಾಡುಗಳನ್ನು, ಹಾಡಲಾಗುತ್ತಿತ್ತು. ಕರಪತ್ರಗಳನ್ನು ಹಂಚಲಾಗುತ್ತಿತ್ತು. ಇದರಲ್ಲಿ ಮಾನಸ ಬಳಗದವರು ಭಾಗವಹಿಸಿದ್ದೆವು.

### ಕೋಮುವಾದ ಅಳಿಯಲಿ - ಭಾವೈಕ್ಯತೆ ಉಳಿಯಲಿ

ಮಾರ್ಚ್ 13, 2002 ರಂದು ಬೆಳಿಗ್ಗೆ 11-30 ರಿಂದ ಬೆಂಗಳೂರು ನಗರದ ಕಾರ್ಪೋರೇಷನ್‌ನಿಂದ ರಾಜಭವನದವರೆಗೆ ಜಾತ್ಯಾತೀತ ವಿದ್ಯಾರ್ಥಿ ಯುವ ಜನರ ರ್‍ಯಾಲಿ ನಡೆಯಿತು. ಇದರಲ್ಲಿ ಹಲವಾರು ವಿದ್ಯಾರ್ಥಿ ಸಂಘಟನೆಗಳ ಯುವ ಜನರು ಪಾಲ್ಗೊಂಡಿದ್ದರು. ಅಲ್ಪಸಂಖ್ಯಾತ ಸಮುದಾಯದ ಮೇಲೆ ನಡೆಯುತ್ತಿರುವ ವ್ಯವಸ್ಥಿತವಾದ ಧಾಳಿಯನ್ನು ರಾಜ್ಯದ ಜಾತ್ಯಾತೀತ ವಿದ್ಯಾರ್ಥಿ ಯುವ ಜನ ಹಾಗು ಇತರ ಸಂಘಟನೆಗಳು ತೀವ್ರವಾಗಿ ಖಂಡಿಸಿದವು. ರಾಜ್ಯದ ಜನತೆ ಭಾವೋದ್ವೇಗಕ್ಕೆ ಒಳಗಾಗದೆ ಕೋಮುಸೌಹಾರ್ದತೆಯನ್ನು ಕಾಪಾಡಲು ಮುಂದಾಗಬೇಕೆಂಬುದು ಇವರ ಮನವಿಯಾಗಿತ್ತು, ಈ ರ್‍ಯಾಲಿಯ ಮುಖ್ಯ ಉದ್ದೇಶವು ಆಗಿತ್ತು.

### ಕೋಮು ಸಾಮರಸ್ಯಕ್ಕಾಗಿ - ಮಾನವ ಸರಪಳಿ

ಮಾರ್ಚ್ 11, 2002 ರಂದು ಸಂಜೆ 5-00 ಗಂಟೆಗೆ ಕೋಮು ಸೌಹಾರ್ದ ವೇದಿಕೆಯವರು ಏರ್ಪಡಿಸಿದ್ದ ಮಾನವ ಸರಪಳಿಯು ನಗರದ ಕಾರ್ಪೋರೇಷನ್ ವೃತ್ತದಿಂದ ಸಿಟಿ ಮಾರ್ಕೆಟ್ ವರೆಗೂ ಮತ್ತು ಮಹಾತ್ಮ ಗಾಂಧಿ ರಸ್ತೆಯ ವರೆಗೂ ನಿರ್ಮಾಣವಾಗಿತ್ತು.

ಇದರಲ್ಲಿ ಬೆಂಗಳೂರು ನಗರದ ಅನೇಕ ಮಾನವ ಹಕ್ಕುಗಳ ಸಂಘಟನೆಗಳು , ಮಹಿಳಾ ಸಂಘಟನೆಗಳು, ಸರ್ಕಾರೇತರ ಸಂಘ ಸಂಸ್ಥೆಗಳು ಸೇರಿದ್ದವು. ಮಾನವ ಸರಪಳಿಯು ಹಲವಾರು ನಿಮಿಷಗಳ ಕಾಲ ಟ್ರಾಫಿಕ್ ಅನ್ನು ತಡೆ ಹಿಡಿದು ನಿಂತಿದ್ದು, ಕೋಮು ದಳ್ಳುರಿಯನ್ನು ತಡೆಹಿಡಿಯಬಲ್ಲವೆಂಬ ವಿಶ್ವಾಸವನ್ನು ಪ್ರತಿಬಿಂಬಿಸುವಂತಿತ್ತು.

### ಮೂಲಭೂತವಾದ ನಿರ್ಮೂಲನೆಯಾಗಲಿ, ಧರ್ಮದ್ರೋಹಿಗಳ ದೌರ್ಜನ್ಯ ಖಂಡಿಸಿ.

ಮಾರ್ಚ್ 14, 2002 ರಂದು ಬೆಳಿಗ್ಗೆ 11 ರಿಂದ, ಬೆಂಗಳೂರಿನ ಮಹಾತ್ಮ ಗಾಂಧಿ ಪ್ರತಿಮೆ ಎದುರು ಕರ್ನಾಟಕ ರಾಜ್ಯದಲಿತ ಸಂಘರ್ಷ ಸಮಿತಿ ಹಾಗೂ ಕರ್ನಾಟಕ ರಾಜ್ಯ ದಲಿತ ವಿದ್ಯಾರ್ಥಿ ಒಕ್ಕೂಟ ಗಳನ್ನೊಳಗೊಂಡಂತೆ ಅನೇಕ ಸಂಘ ಸಂಸ್ಥೆಯವರು ಸೇರಿ ನಡೆಸಿದ ಧರಣಿಯಲ್ಲಿ ಡಾ|| ಸಿದ್ದಲಿಂಗಯ್ಯ, ಪ್ರೊ|| ಕಿ. ರಂ. ನಾಗರಾಜ್, ಪ್ರೊ|| ಜಿ.ಕೆ. ಗೋವಿಂದರಾವ್, ಸತ್ಯವ್ರತ, ಪ್ರೊ|| ಹಸನ್‌ಮನ್ಸೂರ್ ಇತ್ಯಾದಿ ಗಣ್ಯವ್ಯಕ್ತಿಗಳು ಹಾಗು ಸಾಮಾಜಿಕ ಕಾರ್ಯಕರ್ತರು ಪಾಲ್ಗೊಂಡಿದ್ದರು.

ಹಿಂದೂಗಳು, ಮುಸಲ್ಮಾನರು, ಕ್ರೈಸ್ತರು, ಹಿಂದುಳಿದವರು, ದಲಿತರು ಹೀಗೆ ಯಾರೇ ಆಗಲೀ ತಮಗೆ ಅನ್ಯಾಯವಾಗಿದೆ ಎಂದು ಭಾವಿಸಿದರೆ, ಬಗೆಹರಿಸಿಕೊಳ್ಳಲು ಅವರು ಬಳಸಬೇಕಾಗಿರುವ ದಾರಿ ಖಂಡಿತ ಹಿಂಸೆಯಲ್ಲ ಎಂಬುದು ಈ ಧರಣಿಯ ಮುಖ್ಯ ಉದ್ದೇಶ ಹಾಗೂ ಘೋಷಣೆಯು ಆಗಿತ್ತು.

### ಜನಮತ

ಜನಪರ ಸಂಘಟನೆಗಳ ಮಾನವ ಸೌಹಾರ್ದ ವೇದಿಕೆಯು ಅಂಬೇಡ್ಕರ್ ಜಯಂತಿಯಂದು ಬೆಳಿಗ್ಗೆ 10-30 ಕ್ಕೆ ವಿ.ವಿ. ಪುರಂ ನಲ್ಲಿರುವ ಕುವೆಂಪು ಕಲಾ ಕ್ಷೇತ್ರದಲ್ಲಿ ಸಭೆಯನ್ನು ಏರ್ಪಡಿಸಿದ್ದರು. ಜನಮತ ವೇದಿಕೆಯ ಎಲ್ಲ ಸಹಭಾಗಿ ಸಂಘಟನೆಗಳು ತಮ್ಮ ತಮ್ಮ ಪ್ರತಿನಿಧಿಗಳೊಂದಿಗೆ ಇದರಲ್ಲಿ ಭಾಗವಹಿಸಿ ತಮ್ಮ ಚಿಂತನೆಗಳನ್ನು ಹಂಚಿಕೊಂಡರು. ಕರ್ನಾಟಕದ ನೆಲದಲ್ಲಿ ಕೋಮುವಾದಿಗಳನ್ನು ಹಿಮ್ಮೆಟ್ಟಿಸಲು ಅಗತ್ಯವಾದ ಕಾರ್ಯಸೂಚಿಯನ್ನು ಈ ಸಭೆಯಲ್ಲಿ ರೂಪಿಸಲಾಯಿತು. ಸಭೆಯಲ್ಲಿ ಗೋಪಾಲ್ ಮೆನನ್‌ರವರ 'ಹೇರಾಮ್' ಸಾಕ್ಷ್ಯ ಚಿತ್ರವನ್ನು ತೋರಿಸಲಾಯಿತು.

ಒಟ್ಟಿನಲ್ಲಿ ಕರ್ನಾಟಕ ರಾಜ್ಯ ಸರ್ಕಾರವು ವಿ.ಹೆಚ್.ಪಿ ಮತ್ತಿತರ ಸಂಘಟನೆಗಳು ಅಲ್ಪಸಂಖ್ಯಾತರ ಮೇಲೆ ನಡೆಸುತ್ತಿರುವ ಉಗ್ರ ಅಪಪ್ರಚಾರದ ವಿರುದ್ಧ ಮತ್ತು ಜನಸಮುದಾಯದ ಶಾಂತಿ, ಸೌಹಾರ್ದತೆ ಕದಡುತ್ತಿರುವ

ಮತಾಂಧ ಶಕ್ತಿಗಳ ವಿರುದ್ಧ ತೀವ್ರ ಕ್ರಮಗಳನ್ನು ಕೈಗೊಳ್ಳಬೇಕೆಂಬುದು ಈ ಎಲ್ಲಾ ಸಂಘಟನೆಗಳ ಒತ್ತಾಯ ಮತ್ತು ಪ್ರಚಾರವಾಗಿದೆ.

**ಮಹಿಳಾ ಸಮಾನತೆ ಹಾಗೂ ವಿಶ್ವ ಶಾಂತಿಗಾಗಿ ಮಹಿಳೆಯರ ಆಗ್ರಹ**

ಹಲವಾರು ಮಹಿಳಾ ಸಂಘಟನೆಗಳನ್ನೊಳಗೊಂಡ ಮಹಿಳಾ ಒಕ್ಕೂಟವು ಮಾರ್ಚ್ 9 ರಂದು ಮಹಿಳಾ ದಿನಾಚರಣೆಯನ್ನು ಕೋಮುವಾದ ವಿರೋಧಿ ದಿನವನ್ನಾಗಿ ಆಚರಿಸಿತು.

ಮಹಿಳೆಯರ ಮೇಲಾಗುತ್ತಿರುವ ಅನೇಕ ದೌರ್ಜನ್ಯಗಳ ವಿರುದ್ಧ ಹೋರಾಡುತ್ತಿರುವ ಹಲವು ಗುಂಪುಗಳೂ, ಮಾನವೀಯ ಕಾಳಜಿಗಳನ್ನು ಪ್ರತಿಧ್ವನಿಸುವ ಅನೇಕ ಸಂಘಟನೆಗಳು ಒಂದಾಗಿ ಸೇರಿ ಎಲ್ಲರಲ್ಲಿರುವ ಕಳಕಳಿ, ಆತಂಕಗಳನ್ನು ಸರ್ವಜನರ ಸಮ್ಮುಖಕ್ಕೆ ತರಲಾಯಿತು.

ಬೆಂಗಳೂರಿನಲ್ಲಿರುವ ಎಲ್ಲಾ ಮಹಿಳಾ ಮಾನವ, ಲೈಂಗಿಕ ಅಲ್ಪಸಂಖ್ಯಾತರ ಸಂಘಟನೆಗಳೂ ಹಾಗೂ ಇತರ ಸಂಘ ಸಂಸ್ಥೆಯವರೆಲ್ಲರೂ ಒಟ್ಟಿಗೆ ಸೇರಿ ಸುಮಾರು ಏಳು ಸಾವಿರ ಮಹಿಳೆಯರು ಹಾಗೂ ಪುರುಷರನ್ನು ಒಳಗೊಂಡಂತೆ ಕಾರ್ಪೊರೇಷನ್‌ನ ಕಂಠೀರವ ಕ್ರೀಡಾಂಗಣದಿಂದ ಪೊಲೀಸ್ ಪೆರೇಡ್ ಮೈದಾನದವರೆಗೂ ಮೆರವಣಿಗೆ ನಡೆಯಿತು. ಹಲವು ಬೇಡಿಕೆಗಳನ್ನು ಒಳಗೊಂಡ ಕರಪತ್ರವನ್ನು ಹಂಚಿಕೊಂಡು ಹೋಗಿದ್ದರ ಜೊತೆಗೆ ಸಮಾನತೆಯ, ಕೋಮು ಸೌಹಾರ್ದದ ಗೀತೆಗಳನ್ನು ಹಾಡಿಕೊಂಡು ಹೋಗಲಾಯಿತು. ಈ ಮೆರವಣಿಗೆಯಲ್ಲಿ ಮಹಿಳೆಯರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು. ಪೊಲೀಸ್ ಪೆರೇಡ್ ಮೈದಾನದಲ್ಲಿ ಸಾರ್ವಜನಿಕ ಸಭೆ ಏರ್ಪಡಿಸಲಾಗಿತ್ತು. ಅಲ್ಲಿ ಬೀದಿ ನಾಟಕಗಳನ್ನು ಪ್ರದರ್ಶಿಸಲಾಯಿತು. ಹಾಡುಗಳನ್ನು ಹಾಡಲಾಯಿತು. ಮಲ್ಲಿಕಾ ಸಾರಾಭಾಯಿಯವರು ಮತ್ತು ಹಲವು ಸಂಘಟನೆಯವರು ಮಾತನಾಡಿದರು.

-ವರದಿ: ಲಕ್ಷ್ಮಿ



REGD No. : CPMG/KA/BGE/289/2001

BOOK - POST
PRINTED MATTER

ವಿಳಾಸ:
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067